ಕರ್ನಾಟಕ

# ಸ್ಕೌಟ್ ಮತ್ತು ಗೈಡ್

ತಿಂಗಳ ವಾರ್ತಾಪತ್ರಿಕೆ

# Karnataka Scout & Guide

Monthly News Magazine

150 YEARS OF CELEBRATING THE MAHATMA

Vol-16 | Issue No. 10 | October - 2019 | 10/-




ಮಹಾತ್ಮ ಗಾಂಧೀಜಿಯವರ 150ನೇ ಜಯಂತಿ ಪ್ರಯುಕ್ತ 02 ಅಕ್ಟೋಬರ್ 2019ರಂದು
ಬೆಂಗಳೂರಿನ ವಿಧಾನಸೌಧದ ಮುಂಭಾಗದಲ್ಲಿರುವ ಗಾಂಧಿ ಪ್ರತಿಮೆ ಬಳಿ ರಾಜ್ಯ ಸಂಸ್ಥೆ ಏರ್ಪಡಿಸಿದ್ದ
ಸರ್ವಧರ್ಮ ಪ್ರಾರ್ಥನೆಯಲ್ಲಿ ವಿವಿಧ ಶಾಲೆಗಳ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು
ರಾಜ್ಯ ಸಂಸ್ಥೆ ಪದಾಧಿಕಾರಿಗಳು ಹಾಗು ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.
ಕಾರ್ಯಕ್ರಮದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಭಾಗವಹಿಸಿ ಶುಭಕೋರಿದರು.




ಬೆಂಗಳೂರಿನ ವಿಧಾನಸೌಧದ ಬಳಿ ಇರುವ ಮಹಾತ್ಮಗಾಂಧೀ ಪ್ರತಿಮೆಗೆ, ಅವರ 150ನೇ ಜಯಂತಿ ಆಚರಣೆ ಪ್ರಯುಕ್ತ 02 ಅಕ್ಟೋಬರ್ 2019ರಂದು ಕರ್ನಾಟಕ ಸರ್ಕಾರ ಏರ್ಪಡಿಸಿದ್ದ ಪುಷ್ಪನಮನ ಕಾರ್ಯಕ್ರಮದಲ್ಲಿ ಭಾಗವಹಿಸಿದ ಕರ್ನಾಟಕದ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಸಮಾರಂಭದಲ್ಲಿ ಭಾಗವಹಿಸಿದ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೆ ಶುಭಹಾರೈಸಿದರು. ರಾಜ್ಯದ ಮಾನ್ಯ ಕಂದಾಯ ಸಚಿವರಾದ ಶ್ರೀ ಆರ್. ಅಶೋಕ್, ಮುಖ್ಯಮಂತ್ರಿಗಳ ರಾಜಕೀಯ ಕಾರ್ಯದರ್ಶಿ ಮಾನ್ಯ ಶ್ರೀ ಎಸ್.ಆರ್. ವಿಶ್ವನಾಥ್, ಸರ್ಕಾರದ ಮುಖ್ಯ ಕಾರ್ಯದರ್ಶಿ ಶ್ರೀ ಟಿ.ಎಂ. ವಿಜಯಭಾಸ್ಕರ್, ನಗರದ ಪ್ರಥಮ ಪ್ರಜೆ ಪೂಜ್ಯ ಶ್ರೀ ಗೌತಮ್‌ಕುಮಾರ್ ಜೈನ್, ಉಪಮೇಯರ್ ಮಾನ್ಯ ಶ್ರೀ ಸಿ.ಆರ್. ರಾಮ ಮೋಹನ್‌ರಾಜು ಹಾಗು ರಾಜ್ಯ ಸಂಸ್ಥೆಯ ಮತ್ತು ರಾಷ್ಟ್ರೀಯ ಸಂಸ್ಥೆಯ ದಕ್ಷಿಣ ಪ್ರಾದೇಶಿಕ ವಿಭಾಗದ ಪ್ರತಿನಿಧಿಗಳು ಚಿತ್ರದಲ್ಲಿದ್ದಾರೆ.



ಅಕ್ಟೋಬರ್ 02ರಂದು ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದಲ್ಲಿ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ಮಹಾತ್ಮ ಗಾಂಧಿಜಿಯವರ 150ನೇ ಜನ್ಮ ದಿನಾಚರಣೆ ಮತ್ತು ಲಾಲ್‌ಬಹದ್ದೂರ್ ಶಾಸ್ತ್ರಿ ಅವರ 115ನೇ ಜನ್ಮ ದಿನಾಚರಣೆಯ ಕಾರ್ಯಕ್ರಮದ ಉದ್ಘಾಟನೆಯನ್ನು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ನೆರವೇರಿಸಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ, ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ, ಶ್ರೀ ಎಸ್. ಉಮೇಶ್ ಶಾಸ್ತ್ರಿ, ಶ್ರೀ ಕೆ.ಪಿ. ಬಿಂದುಕುಮಾರ್ ಮತ್ತು ಜಿಲ್ಲಾ ಸಂಸ್ಥೆ ಇತರ ಪದಾಧಿಕಾರಿಗಳು ಭಾಗವಹಿಸಿದ್ದರು.

ಸೆಪ್ಟೆಂಬರ್ 30ರಂದು ಧಾರವಾಡ ಜಿಲ್ಲಾ ಸಂಸ್ಥೆಯ ಶತಮಾನೋತ್ಸವ ಕಾರ್ಯಕ್ರಮದ ಉದ್ಘಾಟನೆಯನ್ನು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಬಸವರಾಜ ಹೊರಟ್ಟಿ, ಸಂಸ್ಥೆಯ ಉಪಾಧ್ಯಕ್ಷಣೆ ಶ್ರೀಮತಿ ರಜನಿದಾಸ್, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ವಿದ್ಯಾ ನಾಡಗೀರ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಬಿ.ವಿ. ಕಟ್ಟಿ ಮತ್ತು ಇತರ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.









150 YEARS OF CELEBRATING THE MAHATMA

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# KARNATAKA Scout & Guide

MONTHLY NEWS MAGAZINE




ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka

ಸಂಚಿಕೆಯ ವಾರ್ಷಿಕ ಚಂದಾ ರೂ. 100/-

ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39, ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.


## ಪರಿವಿಡಿ







# ರಾಜ್ಯ ಮುಖ್ಯ ಆಯುಕ್ತರ ನುಡಿ



ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,
ಸಸ್ನೇಹ ನಮಸ್ಕಾರಗಳು

**ತಿಂಗಳ ಧ್ಯೇಯ ವಾಕ್ಯ: "ಸ್ವಚ್ಛ ಭಾರತ ಶ್ರೇಷ್ಠ ಭಾರತ"**

ಕಾಲದಿಂದ ಕಾಲಕ್ಕೆ ನಮ್ಮ ಆಲೋಚನೆಗಳು ಮತ್ತು ಕಾರ್ಯಚಟುವಟಿಕೆಗಳ ಮೇಲೆ ಗಂಭೀರ ಪ್ರಭಾವವನ್ನು ಬೀರುವ, ಚರಿತ್ರೆಯ ಹಾದಿಯನ್ನು ಬದಲಿಸುವಂತಹ ವ್ಯಕ್ತಿಗಳು ಸಮಾಜದಲ್ಲಿ ಕಾಣಿಸಿಕೊಳ್ಳುತ್ತಾರೆ. ಸಮಸ್ತ ಪ್ರಕೃತಿಯೂ ಸೇರಿದಂತೆ, ಬದುಕಿನ ವಾತಾವರಣವನ್ನು ಬದಲಾಯಿಸುವಂತಹ ಅವರ ಬದುಕು ಮತ್ತು ಚಿಂತನೆ ಪ್ರಪಂಚದ ಮೇಲೆ ಗಾಢ ಪರಿಣಾಮವನ್ನು ಬೀರುತ್ತದೆ. ರಾಮ, ಕೃಷ್ಣ, ಬುದ್ಧ, ಏಸು, ಪೈಗಂಬರ್, ಬಸವಣ್ಣ, ಕಾರ್ಲ್‌ಮಾರ್ಕ್ಸ್, ಗಾಂಧೀಜಿ, ಅಂಬೇಡ್ಕರ್ ಮುಂತಾದ ಮಹನೀಯರುರು ಈ ಸಾಲಿಗೆ ಸೇರಿದವರು. ಇವರನ್ನು ಜ್ಞಾಪಿಸಿಕೊಳ್ಳುವುದು ಅವರ ಬದುಕು, ಬರಹ ಮತ್ತು ಸಂದೇಶಗಳಿಂದ ಮಾತ್ರವಲ್ಲದೇ, ಅವರುಗಳ ಆದರ್ಶವನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡು, ಸಮಾಜವನ್ನು ಹೇಗೆ ಸಕಾರಾತ್ಮಕ ಮಾರ್ಗದಲ್ಲಿ ಕೊಂಡೊಯ್ಯಬೇಕು ಎಂಬುದಾಗಿದೆ.

ಈ ತಿಂಗಳ ಎರಡರಂದು ಗಾಂಧಿಜಿಯವರ 150ನೆಯ ಹುಟ್ಟಿದ ಹಬ್ಬವನ್ನು ಆಚರಿಸಿದೆವು. ನುಡಿದಂತೆ ನಡೆದ ಅಪರೂಪದ ವ್ಯಕ್ತಿ ಅವರು. ಸತ್ಯ, ಸತ್ಯಾಗ್ರಹ, ಅಹಿಂಸೆ, ಸರಳತೆ, ನಿಸ್ಪೃಹತೆ, ನಿರ್ಭೀತಿ ಮೊದಲಾದ ಆದರಣೀಯ ಗುಣಗಳು ಅವರಲ್ಲಿತ್ತು. ಜೊತೆಗೆ ಈ ಸದ್ಗುಣಗಳನ್ನು ಒಂದು ಜನಾಂಗದ ಚಿಂತನೆಯಲ್ಲಿ ಅಚ್ಚಿಸಿ, ಅನುಸರಿಸುವಂತೆ ಮಾಡಿದರು.
ನಾವು ಗಾಂಧಿಜಯಂತಿಯಂದು ಆಚರಿಸುವಕಾರ್ಯಕ್ರಮವು ಕೇವಲ ಸಾಂಕೇತಿಕ. ಅವರ ಆದರ್ಶಗಳು, ನಮ್ಮ ಬದುಕಿನ ಭಾಗವಾದರೆ ಜಯಂತಿಗಳ ಆಚರಣೆಯು ಅರ್ಥಪೂರ್ಣವಾಗುತ್ತದೆ.



ಗಾಂಧಿಜಯಂತಿಯಂದು ಬೆಂಗಳೂರಿನ ವಿಧಾನಸೌಧದ ಬಳಿ ಇರುವ ಗಾಂಧೀಜಿ ಪ್ರತಿಮೆಯ ಮುಂದೆ ನಾವೆಲ್ಲರೂ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಿದೆವು. ನಮ್ಮೊಂದಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಸಂಸ್ಥೆಯ ಅಧ್ಯಕ್ಷರಾದ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಬಿ.ಎಸ್.ಯಡಿಯೂರಪ್ಪ ನವರು ಭಾಗವಹಿಸಿದ್ದರು. ಅವರೊಂದಿಗೆ ಸರ್ವಶ್ರೀ ಆರ್. ಅಶೋಕ, ಮಾನ್ಯ ಕಂದಾಯ ಸಚಿವರು, ಎಸ್.ಆರ್. ವಿಶ್ವನಾಥ್, ವಿಧಾನಸಭಾ ಸದಸ್ಯರು, ಶ್ರೀ ಗೌತಮ್ ಕುಮಾರ್‌ಜೈನ್, ಬೆಂಗಳೂರು ನಗರದ ಪೂಜ್ಯ ಮಹಾಪೌರರು ಮತ್ತು ಇತರ ಗಣ್ಯರು ಭಾಗವಹಿಸಿದ್ದರು. ಅಂದು ಕರ್ನಾಟಕ ಉಚ್ಛನ್ಯಾಯಾಲಯದ ಆವರಣವನ್ನು ಸ್ವಚ್ಛಗೊಳಿಸುವ ಕಾರ್ಯಕ್ರಮವನ್ನೂ ಹಮ್ಮಿಕೊಂಡಿದ್ದೆವು. ಮುಖ್ಯ ನ್ಯಾಯಾಧೀಶರಾದ ಶ್ರೀ ಶ್ರೀನಿವಾಸ್ ಅಭಯ್ ವೋಕ ಅವರು ಮತ್ತು ಹಲವಾರು ನ್ಯಾಯಾಧೀಶರು ಭಾಗವಹಿಸಿದ್ದು ಸಂತೋಷದ ವಿಷಯ. ಇದೇ ರೀತಿಯ ಕಾರ್ಯಕ್ರಮಗಳು ಕರ್ನಾಟಕದಾದ್ಯಂತ ನಡೆದಿದೆ. ವಾರ್ತಾಪತ್ರದಲ್ಲಿ ಈ ಕಾರ್ಯಕ್ರಮಗಳ ವಿವರಗಳನ್ನು ಪ್ರಕಟಿಸಿದ್ದೇವೆ.



ರಾಜ್ಯಾದ್ಯಂತ ಸುಮಾರು 25 ಸಾವಿರ ಸ್ಕೌಟ್ಸ್-ಗೈಡ್ಸ್‌ಗಳು ಸ್ವಚ್ಛ ಭಾರತ ಅಭಿಯಾಯನದಲ್ಲಿ ಭಾಗವಹಿಸುವ ಮೂಲಕ ಗಾಂಧೀಜಿಯವರ ಆಶಯಗಳನ್ನು ಅನುಷ್ಠಾನಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ.



ಅಕ್ಟೋಬರ್ 2 ರಂದು, ಭಾರತದ ದ್ವಿತೀಯ ಪ್ರಧಾನ ಮಂತ್ರಿ ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ ಅವರ 116ನೆಯ ಜನ್ಮ ದಿನ. ಬಡ ಕುಟುಂಬದಲ್ಲಿ ಹುಟ್ಟಿ, ಬಾಲ್ಯದಲ್ಲಿ ತೀವ್ರ ಸಂಕಷ್ಟಗಳನ್ನು ಅನುಭವಿಸಿದರು. ಸ್ವಂತ ಶ್ರಮ ಮತ್ತು ಸ್ವಾತಂತ್ರ್ಯ ಹೋರಾಟದ ಛಲದಿಂದ ನಾಯಕತ್ವಕ್ಕೆ ಬೆಳೆದ ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ ಅವರು ಜೂನ್ 1964 ರಿಂದ ಜನವರಿ 1966 ರವರೆಗೆ ಪ್ರಧಾನಮಂತ್ರಿಯಾಗಿದ್ದರು.

1965 ರಲ್ಲಿ ನಡೆದ ಭಾರತ ಪಾಕಿಸ್ತಾನ ಯುದ್ಧದಲ್ಲಿ ಅತ್ಯಂತ ಸಮರ್ಥವಾಗಿ ಯುಕ್ತಿಯಿಂದ ದೇಶವನ್ನು ಮುನ್ನಡೆಸಿ ಜಯವನ್ನು ತಂದುಕೊಟ್ಟರು. "ಜೈ ಜವಾನ್ – ಜೈ ಕಿಸಾನ್" ಘೋಷಣೆಯನ್ನು ದೇಶಕ್ಕೆ ನೀಡಿದರು. ರೈತರಿಗೆ ಮತ್ತು ಸೈನಿಕರಿಗೆ ಜಯಕಾರ ಹೇಳುವ ಈ ಘೋಷಣೆಯು ನಮ್ಮೆಲ್ಲರಿಗೂ ಈಗಲೂ ಉತ್ಸಾಹವನ್ನು, ಪ್ರೇರಣೆಯನ್ನು ನೀಡುತ್ತದೆ.

62ನೆ ಯ ಜಾಂಬೋರಿ ಆನ್ ದ ಏರ್ (JOTA) ಮತ್ತು 23ನೆಯ ಜಾಂಬೋರಿ ಆನ್ ದ ಇಂಟರ್‌ನೆಟ್ (JOTI) ಕಾರ್ಯಕ್ರಮವು 19 ಮತ್ತು 20 ಅಕ್ಟೋಬರ್ 2019 ರಂದು ಬಹಳ ಯಶಸ್ವಿಯಾಗಿ ನಡೆಯಿತು. ಕರ್ನಾಟಕದಾದ್ಯಂತ ನಮ್ಮ ಮಕ್ಕಳು "ಆಕಾಶವಾಣಿ ಜಾಂಬೂರಿ ಮತ್ತು ಅಂತರ್ಜಾಲ ಜಾಂಬೂರಿ"ಯಲ್ಲಿ ಭಾಗವಹಿಸಿ, ಪ್ರಪಂಚದಾತ್ಯಂತ ತಮ್ಮ ಗೆಳೆಯರೊಂದಿಗೆ ಮಾತನಾಡಿದ್ದಾರೆ. ಅನುಭವವನ್ನು ಹಂಚಿಕೊಂಡಿದ್ದಾರೆ. "JOTA-JOTI" ಕಾರ್ಯಕ್ರಮವು ಮನೋವಿಕಾಸಕ್ಕೆ ಸೂಕ್ತ ವೇದಿಕೆಯಾಗಿದೆ. ಸ್ಕೌಟ್ ಚಳವಳಿಯ ವ್ಯಾಪಕತೆ ಅವರ ಅರಿವಿಗೆ ಬರುತ್ತದೆ. "JOTA-JOTI" ಕಾರ್ಯಕ್ರಮಕ್ಕೆ ಸಹಕರಿಸುತ್ತಿರುವ ವಿವಿಧ ಅಮೆಚೂರ್ ರೇಡಿಯೋ ಸಂಸ್ಥೆಗಳಿಗೆ ನಾನು ಕೃತಜ್ಞನಾಗಿದ್ದೇನೆ.





ಬೆಳಕಿನ ಹಬ್ಬ ದೀಪಾವಳಿ ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆಗೆ ಹೆಚ್ಚಿನ ಬೆಳಕು ಚೆಲ್ಲಲೆಂದು ಆಶಿಸುತ್ತೇನೆ. ಶಬ್ಧಮಾಲಿನ್ಯ ಮತ್ತು ವಾಯು ಮಾಲಿನ್ಯವನ್ನು ಉಂಟುಮಾಡುವ ಪಟಾಕಿಗಳನ್ನು ಬಳಸದೇ, ನಾವೆಲ್ಲರೂ "ಪರಿಸರ ದೀಪಾವಳಿ"ಯನ್ನು ಆಚರಿಸೋಣ.

ನವೆಂಬರ್ 01ರಂದು ನಾವು 64ನೆಯ ಕನ್ನಡ ರಾಜ್ಯೋತ್ಸವ ಆಚರಿಸಲಿದ್ದೇವೆ. ವಿವಿಧ ಭಾಗಗಳಾಗಿ ಹಂಚಿಹೋಗಿದ್ದ ಕನ್ನಡ ಭಾಷಿಕರನ್ನು ಒಂದುಗೂಡಿಸಿ 01 ನವೆಂಬರ್ 1956ರಂದು ಅಂದಿನ ಮೈಸೂರು ರಾಜ್ಯವನ್ನು ರಚಿಸಲಾಯಿತು. 1973ರಲ್ಲಿ "ಕರ್ನಾಟಕ"ವೆಂದು ಮರುನಾಮಕರಣ ಮಾಡಲಾಯಿತು. ಕನ್ನಡ ಕುಲಪುರೋಹಿತರೆಂದು ಗುರುತಿಸುವ ಆಲೂರು ವೆಂಕಟರಾಯರು ಏಕೀಕೃತ ಕರ್ನಾಟಕದ ಕನಸನ್ನು 1905ರಲ್ಲಿಯೇ ಕಂಡಿದ್ದರು.



ನಂತರ ಶ್ರೀ ಬಿ.ಎಂ. ಶ್ರೀಕಂಠಯ್ಯ, ಶ್ರೀ ಅ.ನ. ಕೃಷ್ಣರಾವ್, ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶ್ರೀ ಶಿವರಾಮ ಕಾರಂತ ಮುಂತಾದ ಸಾಹಿತ್ಯ ದಿಗ್ಗಜರು ಏಕೀಕರಣಕ್ಕಾಗಿ ಪ್ರಯತ್ನ ಮಾಡಿದರು. ಅವರೊಂದಿಗೆ ಹಲವಾರು ಹಿರಿಯ ರಾಜಕೀಯ ನೇತಾರರು ಮತ್ತು ಸಾಮಾಜಿಕ ಧುರೀಣರು ಕೈಜೋಡಿಸಿದರು. ಇವರೆಲ್ಲರ ಪ್ರಯತ್ನದ ಫಲವಾಗಿ ಕರ್ನಾಟಕವು ರೂಪುಗೊಂಡಿದೆ.

ನವೆಂಬರ್ 2 ಮತ್ತು 3 ರಂದು ರಾಜ್ಯಮಟ್ಟದ ದೇಶಭಕ್ತಿ ಗೀತಗಾಯನ ಸ್ಪರ್ಧೆ, ಕಬ್ಸ್-ಬುಲ್‌ಬುಲ್ಸ್/ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳಿಗೆ ಮೈಸೂರಿನಲ್ಲಿ ನಡೆಯಲಿದೆ. ಜಿಲ್ಲೆಯ ಮಟ್ಟದಲ್ಲಿ ಪ್ರಥಮ ಬಹುಮಾನ ಪಡೆದ ಅಭ್ಯರ್ಥಿಗಳು ಈ ಸ್ಪರ್ಧೆಯಲ್ಲಿ ಭಾಗವಹಿಸುತ್ತಾರೆ. ಇದು 4ನೇ ವರ್ಷದ ಸ್ಪರ್ಧೆ. ಜಿಲ್ಲಾ ಮಟ್ಟದಲ್ಲಿ ಹೆಚ್ಚು ಅಭ್ಯರ್ಥಿಗಳು ಭಾಗವಹಿಸುತ್ತಿರುವುದು ಸಂತೋಷದ ವಿಷಯ. ಜಿಲ್ಲೆಯಲ್ಲಿ ಬಹುಮಾನ ಪಡೆದ ಮಕ್ಕಳನ್ನೂ ಮತ್ತು ಭಾಗವಹಿಸಿದವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

(ಪಿ.ಜಿ.ಆರ್. ಸಿಂಧ್ಯ)

ರಾಜ್ಯ ಮುಖ್ಯ ಆಯುಕ್ತರು

# ರಾಜ್ಯೋತ್ಸವ

ಗೊ.ರು. ಚನ್ನಬಸಪ್ಪ
ಗೌರವ ಅಧ್ಯಕ್ಷರು
ಪ್ರಕಟಣಾ ಸಮಿತಿ, ಭಾ.ಸ್ಕೌ&ಗೈ, ಕರ್ನಾಟಕ

ಇಚಾರಿತ್ರಿಕ ಕಾರಣಗಳಿಂದ ಹರಿದು ಹಂಚಿ ಹೋಗಿದ್ದ ಕನ್ನಡದ ನೆಲ ಒಂದು ಭೌಗೋಳಿಕ ನೆಲೆಗೆ ಬಂದು ನಿಂತ ಮರೆಯಲಾಗದ ದಿನ 1956 ರ ನವೆಂಬರ್ 1. ಸ್ವತಂತ್ರ ಭಾರತದ ರಾಜ್ಯ ಪುನರ್ವಿಂಗಡಣೆ ಯೋಜನೆಯಲ್ಲಿ ರೂಪುಗೊಂಡ ನಮ್ಮ ಕರ್ನಾಟಕ ಈಗ 64ನೆಯ ರಾಜ್ಯೋತ್ಸವವನ್ನು ಆಚರಿಸುತ್ತಿದೆ.

ಕಾಲಮಾನದ ಏರಿಳಿತಗಳನ್ನು ದಾಟಿ ಬಂದಿರುವ ಮತ್ತು ತನ್ನ ಉಜ್ವಲ ಇತಿಹಾಸಕ್ಕೆ ಪ್ರಗತಿ ಪರಿವರ್ತನೆಯ ಹೊಸ ಅಧ್ಯಾಯ ಬರೆಯುತ್ತಿರುವ ನಮ್ಮ ನಾಡಿನ ಬಗೆಗೆ ಸಹಜವಾಗಿಯೇ ಪ್ರತಿಯೊಬ್ಬ ಕನ್ನಡಿಗನಿಗೂ ಅಭಿಮಾನವಿದೆ; ಹೆಮ್ಮೆಯಿದೆ. 'ಕರ್ನಾಟಕ' ಎನ್ನುವುದು ಕೇವಲ ಒಂದು ಹೆಸರಲ್ಲ. ಅದೊಂದು ಮಂತ್ರ ಚೇತನಶಕ್ತಿ. ಧರ್ಮ, ಸಾಹಿತ್ಯ, ಸಂಸ್ಕೃತಿ ಮತ್ತು ಕಲೆಗಳ ಕಣಜ. ಹಿಂದೂ, ಬೌದ್ಧ, ಜೈನ, ಕ್ರೈಸ್ತ, ಇಸ್ಲಾಂ ಇತ್ಯಾದಿ ನಾನಾ ಧರ್ಮಗಳ ಸಂಗಮ. ಸ್ವಾಭಿಮಾನ, ಸಜ್ಜನಿಕೆ, ಸಮಭಾವಗಳ ಸಹೃದಯಿ ಸಮುದಾಯ. ಸಮೃದ್ಧ ನೆಲ, ಜಲ, ಕಾಡು, ಕಡಲುಗಳನ್ನು ಪಡೆದಿರುವ ಪುಣ್ಯಭೂಮಿ!

ಅಚ್ಚ ಹಸಿರಿನ ಬೆಟ್ಟ, ದಟ್ಟಡವಿ, ಮನಮೋಹಕ ಕಣಿವೆ, ಹಿತಕರ ಹವೆ, ನಿತ್ಯ ಹರಿಯುವ ನದಿ, ಎತ್ತರದ ಜಲಪಾತ, ಸುತ್ತಿ ಬಳಸುವ ಹಳ್ಳ–ಕೊಳ್ಳ, ಸಡಗರದ ಕಡಲ ತೀರ, ಅಗೆದಷ್ಟು ಸಿಗುವ ಖನಿಜ, ಫಲವತ್ತಾದ ಮಣ್ಣು, ಬೆವರು ಹರಿಸಿ ದುಡಿಯುವ ಜನ–ಇದು ಕರ್ನಾಟಕಕ್ಕೆ ನಿಸರ್ಗ ಕೊಟ್ಟಿರುವ ದೇಣಿಗೆ!

ಕನ್ನಡ ರಾಜ್ಯೋತ್ಸವ ಆಚರಿಸುತ್ತಿರುವ ಈ ಸಂದರ್ಭದಲ್ಲಿ ನಾಡಿನ ಇತಿಹಾಸವನ್ನು ನೆನಪು ಮಾಡಿಕೊಳ್ಳುವುದೇ ಒಂದು ಅವರ್ಣನೀಯ ಅನುಭವ !

* ಅತ್ಯಂತ ಪ್ರಾಚೀನವೆಂದು ಹೇಳಲಾಗಿರುವ 'ಮಹಾಭಾರತ' ಪುರಾಣ ಕಾವ್ಯದಲ್ಲಿ 'ಕರ್ನಾಟಕ'ದ ಪ್ರಸ್ತಾಪವಿದೆ.
* ಲೋಕಪ್ರಸಿದ್ಧ ಅಶೋಕ ಚಕ್ರವರ್ತಿ ಆಳಿದ ಈ ನೆಲವನ್ನು ಶಾತವಾಹನರು, ಪಲ್ಲವರು, ಕದಂಬರು, ಗಂಗರು, ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಕೆಳದಿ–ಕಿತ್ತೂರು ಮನೆತನದವರು, ಮೈಸೂರು ದೊರೆಗಳು ಆಳಿದ್ದಾರೆ.
* ಸಾವಿರ ವರ್ಷಗಳ ಹಿಂದೆಯೇ ಮಧ್ಯಭಾರತದವರೆಗೆ ರಾಷ್ಟ್ರಕೂಟರ ಪರವಾಗಿ ಹೋರಾಡಿದ ಧೀರ ಮಾರಸಿಂಹ ಕನ್ನಡಿಗ!
* ಕಂಚಿಯ ಪಲ್ಲವ ಪರಮೇಶ್ವರನನ್ನು ಸೋಲಿಸಿ ಅವನ ಕಂಠಹಾರವನ್ನು ಕಿತ್ತ ಭೂವಿಕ್ರಮ ಕನ್ನಡಿಗ!
* ಲೋಕಪ್ರಸಿದ್ಧ ಗೊಮ್ಮಟೇಶ್ವರನ ಭವ್ಯ ಮೂರ್ತಿಯನ್ನು ಕೆತ್ತಿಸಿ, ಶಾಶ್ವತವಾಗಿ ನಿಲ್ಲಿಸಿದ ಚಾವುಂಡರಾಯ ಕನ್ನಡಿಗ!
* ಉತ್ತರದ ಭೂಪ ಹರ್ಷ ಚಕ್ರವರ್ತಿಯನ್ನು ಸೋಲಿಸಿ, 'ದಕ್ಷಿಣಾಪಥೇಶ್ವರ' ಎಂಬ ಬಿರುದು ಪಡೆದ ಇಮ್ಮಡಿ ಪುಲಿಕೇಶಿ ಕನ್ನಡಿಗ !
* ಸಿಂಹಳದಿಂದ ಹಿಮಾಲಯದವರೆಗೆ, ಗುಜರಾತಿನಿಂದ ಬಂಗಾಳದವರೆಗೆ ಅಖಂಡ ಭಾರತವನ್ನು ಗೆದ್ದ ರಾಷ್ಟ್ರಕೂಟರ ಗೋವಿಂದ ಕನ್ನಡಿಗ !
* ರಾಜ್ಯಕ್ಕೆ ಕ್ಷಾಮ ಬಂದಾಗ, ಮಹಾಲಕ್ಷ್ಮಿಗೆ ತನ್ನ ಹೆಬ್ಬೆರಳನ್ನು ಒಪ್ಪಿಸಲು ಮುಂದಾದ ನೃಪತುಂಗ ಕನ್ನಡಿಗ!

* ತಮಿಳು ಪಲ್ಲವರು ಬಾದಾಮಿಯನ್ನು ಆಕ್ರಮಿಸಿ ಅದನ್ನು ಸುಟ್ಟರೂ, ಕಂಚಿಯನ್ನು ಗೆದ್ದಾಗ ಅದನ್ನು ಸುಡದೆ ಬಿಟ್ಟು ಔದಾರ್ಯ ತೋರಿದ ಚಾಲುಕ್ಯ ವಿಕ್ರಮಾದಿತ್ಯ ಕನ್ನಡಿಗ!
* ಪ್ರಜೆಗಳ ಕ್ಷೇಮವೇ ಅಧಿಕಾರದಿಂದ ಪಡೆಯುವ ಪ್ರಯೋಜನ ಎಂದು ಲೋಕಕ್ಕೆ ಸಾರಿದ ಗಂಗರು ಕನ್ನಡಿಗರು!
* ಪುರುಷರಿಗಿಂತ ಮಿಗಿಲಾಗಿ ಹೋರಾಡಿ 'ರಣಭೈರವಿ' ಎನಿಸಿಕೊಂಡ ಅಕ್ಕಾದೇವಿ ಕನ್ನಡತಿ!
* ವಿಶ್ವದಲ್ಲೇ ಮೊಟ್ಟಮೊದಲ ಮಹಿಳಾ ಸೈನ್ಯ ಕಟ್ಟಿ ನಡೆಸಿದ ಬೆಳವಡಿ ಮಲ್ಲಮ್ಮ ಕನ್ನಡತಿ!
* ಇಪ್ಪತ್ತಾರು ವರ್ಷಗಳ ಕಾಲ ಅದ್ವಿತೀಯ ಅವಧಿಯ ರಾಜ್ಯಾಡಳಿತ ನಡೆಸಿದ ಕೆಳದಿ ಚೆನ್ನಮ್ಮ ಕನ್ನಡತಿ!
* ಬ್ರಿಟಿಷರ ಬರ್ಬರ ಶಕ್ತಿಯ ವಿರುದ್ಧ ಖಡ್ಗ ಹಿಡಿದು ಹೋರಾಡಿದ ಕಿತ್ತೂರಿನ ವೀರರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ ಕನ್ನಡಿಗರು!
* ಲೋಕಚರಿತ್ರೆಯಲ್ಲೇ ಅಪೂರ್ವವೆನಿಸುವ ಸಮಾಜೋ–ಧಾರ್ಮಿಕ ಕ್ರಾಂತಿ ನಡೆಸಿದ ಬಸವಣ್ಣ ಕನ್ನಡಿಗ!
* 600 ವರ್ಷಗಳ ಹಿಂದೆಯೇ ಚೀನಾ ದೇಶಕ್ಕೆ ಕನ್ನಡದ ರಾಯಭಾರಿಯನ್ನು ಕಳುಹಿಸಿದ್ದ ಬುಕ್ಕರಾಯ ಕನ್ನಡಿಗ!
* ಇಂದು ಅಂತಾರಾಷ್ಟ್ರೀಯ ಗಮನ ಸೆಳೆದಿರುವ ಬೆಂಗಳೂರು ನಗರ ನಿರ್ಮಾತೃ ಕೆಂಪೇಗೌಡ ಕನ್ನಡಿಗ!
* ವಿಶ್ವ ವಿಸ್ಮಯದ ಎಲ್ಲೋರದ ಕೈಲಾಸನಾಥ ದೇವಾಲಯವನ್ನು ರೂಪಿಸಿದ ರಾಷ್ಟ್ರಕೂಟರ ಒಂದನೆಯ ಕೃಷ್ಣ ಕನ್ನಡಿಗ!
* ಜನಹಿತದ ಸೇವೆ ಸಲ್ಲಿಸಿ ಮಾದರಿ ಆಡಳಿತಗಾರರೆಂದು ಹೆಸರಾದ ಮೈಸೂರು ಅರಸರು ಕನ್ನಡಿಗರು!
* ಜಗತ್ತಿನಲ್ಲೇ ಅತ್ಯಂತ ಸುಂದರ ನಗರವೆನಿಸಿದ್ದ ವಿಜಯನರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಹಂಪಿ ಕನ್ನಡಿಗರದ್ದು!
* ಅಲ್ಲಮ, ಅಕ್ಕಮಹಾದೇವಿ ಅವರಂತಹ ಶ್ರೇಷ್ಠ ಅನುಭಾವಿಗಳಿಗೆ ಜನ್ಮ ಕೊಟ್ಟ ಬನವಾಸಿ, ಉಡುತಡಿಗಳು ಕನ್ನಡದ ಗ್ರಾಮಗಳು!
* ಮಾನವ ಧರ್ಮವನ್ನು ಎತ್ತಿ ಹಿಡಿದು ನಾಡಿಗೆ ಪರ್ಯಾಯ ಸಂಸ್ಕೃತಿಯನ್ನೇ ಕೊಟ್ಟ ಕ್ರಾಂತಿಯ ಕಲ್ಯಾಣ ಕನ್ನಡ ನೆಲದ್ದು!
* ಕನಕ, ಪುರಂಧರ, ಸರ್ವಜ್ಞರಂತಹ ಲೋಕ ಚಿಂತಕರು ಹುಟ್ಟಿದ ನೆಲ ಕನ್ನಡನಾಡು!
* ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ ಪಂಪ, ರನ್ನ, ಜನ್ನ, ಪೊನ್ನ, ಹರಿಹರ, ರಾಘವಾಂಕ, ಚಾಮರಸ ಷಡಕ್ಷರಿ, ಲಕ್ಷ್ಮೀಶ, ಲಕ್ಕಣ ದಂಡೇಶ–ಮೊದಲಾದ ಪ್ರತಿಭಾವಂತ ಕವಿಗಳೆಲ್ಲ ಕನ್ನಡಿಗರು.
* ಕರ್ನಾಟಕ ನಿರ್ಮಾಣಕ್ಕಾಗಿ ಹೋರಾಡಿದ ಆಲೂರು ವೆಂಕಟರಾಯರು, ಹರ್ಡೇಕರ್ ಮಂಜಪ್ಪ ನಾ.ಸು. ಹರ್ಡೀಕರ್, ಡೆಪ್ಯೂಟಿ ಚೆನ್ನಬಸಪ್ಪ, ಶಿ.ಶಿ. ಬಸವನಾಳ, ಸಿದ್ಧಪ್ಪ ಕಂಬಳಿ, ಅಣ್ಣು ಗುರೂಜಿ, ಚನ್ನಪ್ಪ ವಾಲಿ ಕಾರ್ನಾಡ ಸದಾಶಿವರಾಯ, ಹಳ್ಳಿಕೇರಿ ಗುದ್ಲೆಪ್ಪ, ಸಿದ್ಧವನಹಳ್ಳಿ ನಿಜಲಿಂಗಪ್ಪ, ಅ.ನ. ಕೃಷ್ಣರಾಯ, ದ.ರಾ. ಬೇಂದ್ರೆ ಶಿವರಾಮ ಕಾರಂತ, ಮೊಹರೆ ಹಣಮಂತರಾವ್, ತಮ್ಮಣ್ಣಪ್ಪ ಚಿಕ್ಕೋಡಿ, ರಂಗನಾಥ ದಿವಾಕರ ಬಿ. ಶಿವಮೂರ್ತಿಶಾಸ್ತ್ರಿ, ವೀರಕೇಸರಿ, ಸೀತಾರಾಮ ಶಾಸ್ತ್ರಿ, ಎಂ.ಎಸ್. ಜೋಯಿಸ್, ದೊಡ್ಡಮೇಟಿ ಅಂದಾನಪ್ಪ ಕೆ.ವಿ. ಪುಟ್ಟಪ್ಪ, ಕೆಂಗಲ್ ಹನುಮಂತಯ್ಯ, ತಗಡೂರು ರಾಮಚಂದ್ರ ರಾಯ, ಬಿ.ಎಂ. ಶ್ರೀಕಂಠಯ್ಯ ನಾಗರತ್ನಮ್ಮ ಹಿರೇಮಠ, ಮುದವೀಡು ಕೃಷ್ಣರಾಯ–ಇವರೆಲ್ಲ ನಮ್ಮವರು, ನಮ್ಮ ಕನ್ನಡಿಗರು!
* ಕುವೆಂಪು, ಬೇಂದ್ರೆ, ಮಾಸ್ತಿ, ಗೋಕಾಕ, ಯು.ಆರ್. ಅನಂತಮೂರ್ತಿ, ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರ–ಇವರೆಲ್ಲ ರಾಷ್ಟ್ರದ ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು.
* ಮಲ್ಲಿಕಾರ್ಜುನ ಮನಸೂರ್, ಬಸವರಾಜ ರಾಜಗುರು ಸಿದ್ಧರಾಮ ಜಂಬಲದಿನ್ನಿ, ಗಂಗೂಬಾಯಿ ಹಾನಗಲ್ಲ ಭೀಮಸೇನ ಜೋಷಿ, ಪಿಟೀಲು ಚೌಡಯ್ಯ, ವೀಣೆ ದೊರೆಸ್ವಾಮಿ ಅಯ್ಯಂಗಾರ್, ಗುಬ್ಬಿವೀರಣ್ಣ, ಹಿರಣ್ಣಯ್ಯ, ಏಣಗಿ ಬಾಳಪ್ಪ ಮೊದಲಾದವರು ರಾಷ್ಟ್ರ ಪ್ರಸಿದ್ಧ ಸಂಗೀತ–ನಾಟಕ ಕಲಾವಿದರು ಕನ್ನಡಿಗರು!

ಹೀಗೆ ಕನ್ನಡ ನಾಡಷ್ಟೇ ಅಲ್ಲದೆ, ಇಡೀ ಭಾರತದ ಕಲೆ, ಸಾಹಿತ್ಯ, ಸಂಸ್ಕೃತಿ, ಧರ್ಮ, ತತ್ತ್ವಶಾಸ್ತ್ರ, ಕೃಷಿ–ಕೈಗಾರಿಕೆ ಇತ್ಯಾದಿ ಎಲ್ಲ ಕ್ಷೇತ್ರಗಳಿಗೂ ಸ್ಮರಣೀಯ ಸೇವೆ ಸಲ್ಲಿಸಿರುವ ಹಿರಿಯರ ಒಂದು ದೊಡ್ಡ ಪಟ್ಟಿಯೇ ಇದೆ.

## ನಿಸರ್ಗ ಸುಂದರ ಪ್ರಶಾಂತ ಪರಿಸರದ ನಮ್ಮ ಕನ್ನಡ ನಾಡಿನಲ್ಲಿ ಹೆಮ್ಮೆಪಟ್ಟುಕೊಳ್ಳುವ ಎಲ್ಲವೂ ಇದೆ:

ಕಣ್ಮನಗಳನ್ನು ಸೆಳೆಯುವ ಜೋಗದ ಜಲಪಲಾತ, ವಿಶ್ವಸೋಜಿಗದ ಗೊಮ್ಮಟಮೂರ್ತಿ, ಲೋಕ ಮಾರುಕಟ್ಟೆ ಮೈಸೂರು ರೇಷ್ಮೆ, ಮೈಸೂರು ಶ್ರೀಗಂಧ, ಬೆರಗುಗೊಳಿಸುವ ವಿಜಯಪುರದ ಗೋಲಗುಂಬಜ್, ಶಿಲ್ಪ ನೈಪುಣ್ಯದ ಐಹೊಳೆ, ಪಟ್ಟದಕಲ್ಲು, ಬೇಲೂರು, ಹಳೇಬೀಡು ದೇವಾಲಯಗಳು, ಪ್ರಸಿದ್ಧ ಪ್ರವಾಸಿ ತಾಣಗಳಾದ ಬೃಂದಾವನ, ರಂಗನತಿಟ್ಟು, ಹಂಪಿ, ಕಿತ್ತೂರು, ಕೂಡಲಸಂಗಮ, ಶ್ರವಣಬೆಳಗೊಳ, ಬೀದರ ಮೊದಲಾದ ಸ್ಥಳಗಳು, ವರ್ಣರಂಜಿತ ವೈವಿಧ್ಯಮಯ ಜನಪದ ಕಲೆಗಳು, ಅಭಿಮಾನ ಪಡುವಂತಹ ಶ್ರೇಷ್ಠ ಸಾಹಿತಿ–ಕಲಾವಿದರು, ಪ್ರಕೃತಿಯ ತೂಗುದೊಟ್ಟಿಲಿನಂತಿರುವ ಮಲೆನಾಡು, ಪ್ರಗತಿಪರ ಕೃಷಿಕರು, ಪ್ರಯತ್ನಶೀಲ ಉದ್ಯಮಿಗಳು, ವಿಶಿಷ್ಟ ವಾಣಿಜ್ಯ ಬೆಳೆಗಳಾದ ಕಾಫಿ, ಕಿತ್ತಳೆ, ಅಡಕೆ ತೋಟಗಳು, ಲಕ್ಷ ಲಕ್ಷ ಕುಟುಂಬಗಳ ಭೂಮಿಗೆ ನೀರೊದಗಿಸುವ ಕೃಷ್ಣ, ಕಾವೇರಿ, ತುಂಗಭದ್ರಾ ನದಿಗಳು, ಅಂತಾರಾಷ್ಟ್ರೀಯ ಖ್ಯಾತಿಗಳಿಸಿರುವ ಆಧುನಿಕ ತಂತ್ರಜ್ಞಾನ ಕೇಂದ್ರಗಳು – ಹೀಗೆ ಒಂದೆರಡಲ್ಲ; ಪ್ರಾಚೀನ, ಅರ್ವಾಚೀನ ಮತ್ತು ಸಮಕಾಲೀನ–ಎನ್ನುವುದೆಲ್ಲವೂ ನಮ್ಮ ನಾಡಿನಲ್ಲಿವೆ.

ಇವೆಲ್ಲಕ್ಕೂ ಸಾರ್ಥಕತೆ ತಂದಿರುವ ಸ್ನೇಹ–ಸೌಹಾರ್ದಗಳ, ಶ್ರಮದ ದುಡಿಮೆಯ, ಸಭ್ಯ ನಡೆ–ನುಡಿಗಳ ಕನ್ನಡಿಗರಿದ್ದಾರೆ; ಕನ್ನಡೇತರರೂ ಇದ್ದಾರೆ. ಎಲ್ಲರೂ ಸಾಮರಸ್ಯದಿಂದ ಕೂಡಿಕೊಂಡು ನಾಡ ಅಭ್ಯುದಯಕ್ಕಾಗಿ ಶ್ರಮಿಸುತ್ತಿದ್ದಾರೆ.

ಕನ್ನಡ ರಾಜ್ಯೋತ್ಸವ ಆಚರಣೆ ಎಂದರೆ, ನಾಡಿನ ಇತಿಹಾಸದ ಹೆಜ್ಜೆಗಳನ್ನು ನೆನೆದು, ವರ್ತಮಾನದ ಸನ್ನಿವೇಶವನ್ನು ಅರ್ಥಮಾಡಿಕೊಂಡು ನಾಡಿನ ಭವಿಷ್ಯದ ಏಳಿಗೆಗಾಗಿ ಸಂಕಲ್ಪ ಮಾಡುವುದು.

ಕನ್ನಡಿಗರ ಕಣ್ಣಲ್ಲಿ ಹೊಸ ತೇಜಸ್ಸು ಮಿಂಚಲಿ. ಅವರ ತೋಳುಗಳಿಗೆ ಹೊಸಬಲ ಬರಲಿ. ಅವರ ಸ್ನಾಯುಗಳಲ್ಲಿ ಹೊಸ ಸಾಮರ್ಥ್ಯ ತುಂಬಲಿ. ಕರ್ನಾಟಕವು ನವಚೇತನ ಪಡೆಯಲಿ.

ಕರ್ನಾಟಕದ ಸಮಸ್ತ ಜನತೆಗೂ ರಾಜ್ಯೋತ್ಸವ ಶುಭಾಶಯಗಳು. ❑❑

## ಹಳೆಯ ಕಾಲದ ಈ ಪ್ರಾಸಬದ್ಧವಾದ ನೀಗ್ರೋ ಪದವನ್ನು ಓದಿ - ನೆಮ್ಮದಿ ತಂದುಕೊಳ್ಳಿ

- ರಾ. ಚಂದ್ರಶೇಖರನ್

ರೈಲು ಹಳಿಗಳ ದಾರಿಯನು ನೋಡು; ಇನ್ನೂ ದೂರ ನೋಡು
ತಲೆ ಕೆರೆದು ನೋಡು; ಮಿದುಳು ಕೆದಕಿ ನೋಡು; ನೋಡು ನೀ ನೋಡು;
ಯಾವುದರ ಪರಿವೆಯೂ ಇಲ್ಲದೆ, ರೈಲು ಓಡುವುದ ನೋಡು
ಮಿದುಳನ್ನು ಕೆದಕದೆ, ಎಂಜಿನಿಯರನು ನೆನೆಯದೆ ರೈಲು ಓಡುವುದು ನೋಡು;

ದೂರದಲಿ, ಹಳಿಗಳೆರಡೂ ಕೂಡಿದಂತೆ ಕಾಣುವೆಡೆ
ರೈಲು ಓಡಲು ಹೇಗೆ ಸಾಧ್ಯ? ಎನಿಸುವುದಲ್ಲವೇ?
ರೈಲು ಹೇಗೆ ಓಡುವುದೋ ನಾಕಾಣೆ; ಹಳಿಗಳು ಕೂಡಿದಂತೆ ಕಾಣುವೆಡೆ
ನೋಡ, ನೋಡುತಿರೆ, ರೈಲು ಓಡುವುದ ಕಾಣುವಿರಲ್ಲವೇ?

ಹತ್ತಿರದ ಹಳಿಗಳನು ನೀನೆ ನೋಡು, ಮತ್ತೆ ಮತ್ತೆ ನೋಡು,
ಹಳಿಗಳವು ಕೂಡಿರದೆ, ಸಮದೂರದೊಳಿವೆ ನೋಡು;
ಅದೇ ದೂರದಿಗಂತದಲಿ, ಕೂಡಿದಂತಿರುವುದನು ನೋಡು,
ಕಿರಿದಾಗಿ ಕೂಡಿದಂತೆ ಕಾಣುವ ಹಳಿಗಳ ಮೇಲೆ ರೈಲು ಓಡುವುದ ನೋಡು;
ದೂರದಾತಾಣವನು ಮುಟ್ಟಿರಲು, ಹಳಿಗಳು ಮತ್ತೆ ಅಗಲವಾಗುವುದ ನೋಡು,
ಹತ್ತು ಹೇಸರ ಕತ್ತೆಗಳಿಗೂ ನಡೆಯಲು ಜಾಗವಿದೆ ನೋಡು;

ಅಂತೆಯೇ ನಾವು, ನಮ್ಮ ಕಷ್ಟಗಳು; ಮುಂಬರುವ ದಿನಗಳಲಿ ಹೇಗೆ?
ದೂರದಲಿ ಕೂಡಿದಂತೆ ಕಾಣುವ ಹಳಿಗಳ ಮೇಲೆ ರೈಲು ಓಡುವಂತೆ,
ನಮ್ಮ ಕಷ್ಟಗಳು ಕಳೆದು, ಹಾಯಾಗಿ, ಮುನ್ನಡೆಯುವೆವು ನಾವು,
ನಮಗರಿಯದಂತೆ, ನಮ್ಮ ತವಕವು ಹರಿದ ಕಾರಣ ಹೊಳೆಯುವುದು ಹೀಗೆ!

(ಸಂಡೆ ಮಾರ್ನಿಂಗ್ ಪೋಸ್ಟ್‌ನಲ್ಲಿ ಕಂಡ, ಈ ಪದ್ಯವನ್ನು "ಏಡ್ಸ್ ಟು ಸ್ಕೌಟ್ ಮಾಸ್ಟರ್ ಷಿಪ್" ಪುಸ್ತಕದಲ್ಲಿ ಬಿ.ಪಿ. ಉಲ್ಲೇಖಿಸಿದ್ದಾರೆ.)
(ಪುಟ 43, 44, 45)

# 101ನೇ ರಾಜ್ಯ ಪರಿಷತ್ ಸಭೆ



ಸೆಪ್ಟೆಂಬರ್ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಕೇಂದ್ರ ಕಛೇರಿ ಶಾಂತಿಗೃಹ ಆವರಣದಲ್ಲಿರುವ "ಕೊಂಡಜ್ಜಿ ಬಸಪ್ಪ ಸಭಾಂಗಣ"ದಲ್ಲಿ ಕರ್ನಾಟಕ ರಾಜ್ಯ ಸಂಸ್ಥೆಯ 101ನೇ ರಾಜ್ಯ ಪರಿಷತ್ ಸಭೆ ಏರ್ಪಡಿಸಲಾಗಿತ್ತು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಎಸ್. ಸುರೇಶ್ ಕುಮಾರ್, ಮಾನ್ಯ ಪ್ರಾಥಮಿಕ ಮತ್ತು ಸಾರ್ವಜನಿಕ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ ಹಾಗೂ ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ಮತ್ತು ಯು.ಟಿ. ಖಾದರ್, ಮಾನ್ಯ ಮಾಜಿ ಸಚಿವರು, ಕರ್ನಾಟಕ ಸರ್ಕಾರ ಇವರುಗಳನ್ನು ಬಿ.ಬಿ.ಎಂ. ಶಾಲೆಯ ಕಬ್ಸ್-ಬುಲ್‌ಬುಲ್ಸ್‌ಗಳು ವಿಧಿವತ್ತಾಗಿ ಸ್ವಾಗತಿಸಿದ ನಂತರ ಸಭೆಗೆ ಆಗಮಿಸಿದರು.

ಸಂಸ್ಥೆಯ ಅಧ್ಯಕ್ಷರೂ ಹಾಗೂ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರ ಅನುಪಸ್ಥಿತಿಯಲ್ಲಿ ಹಿರಿಯ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಪ್ರಾರ್ಥನೆ ನಂತರ ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ ಎಲ್ಲರನ್ನೂ ಸ್ವಾಗತಿಸಿದರು.

ಶ್ರೀ ಪಿ.ಜಿ.ಆರ. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ತಮ್ಮ ಪ್ರಾಸ್ತಾವಿಕ ನುಡಿಯಲ್ಲಿ ರಾಜ್ಯ ಸರ್ಕಾರವು 10 ಸಾವಿರ ಮಕ್ಕಳಿಗೆ "ಕರ್ನಾಟಕ ದರ್ಶನ" ಕಾರ್ಯಕ್ರಮವನ್ನು ಕೈಗೊಳ್ಳಲು ಪ್ರತಿವರ್ಷವೂ ಅನುದಾನ ಬಿಡುಗಡೆಗೊಳಿಸುತ್ತಿದೆ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಜಿಲ್ಲಾ ಪಂಚಾಯತ್ ವತಿಯಿಂದ ರೂ.50 ಸಾವಿರ, ತಾಲ್ಲೂಕ್ ಪಂಚಾಯತ್ ವತಿಯಿಂದ ರೂ.10 ಸಾವಿರ ಮತ್ತು ಗ್ರಾಮ ಪಂಚಾಯತ್ ವತಿಯಿಂದ ರೂ.5 ಸಾವಿರ ಸ್ಕೌಟ್-ಗೈಡ್ ಕಾರ್ಯಕ್ರಮ ಚಟುವಟಿಕೆಗಳಿಗೆ ಬಿಡುಗಡೆ ಮಾಡುತ್ತಿದ್ದು ಸದರಿ ಅನುದಾನವನ್ನು ಮುಂದುವರೆಸಲು ಸಚಿವರಲ್ಲಿ ಮನವಿ ಮಾಡಿದರು.

"ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ನಡೆಸುತ್ತಿರುವ ಹಲವಾರು ಸೃಜನಾತ್ಮಕ ವ್ಯಕ್ತಿತ್ವ ಮತ್ತು ರಾಷ್ಟ್ರ ನಿರ್ಮಾಣ ಕಾರ್ಯಗಳನ್ನು ಶಿಕ್ಷಣ ಸಚಿವರ ಗಮನಕ್ಕೆ ತಂದರು". ಚಳವಳಿಯ ಬೆಳವಣಿಗೆಗೆ ಶಿಕ್ಷಣ ಇಲಾಖೆಯ ಡಿ.ಡಿ.ಪಿ.ಐ., ಬಿ.ಇ.ಓ., ನೋಡಲ್ ಅಧಿಕಾರಿಗಳು ಮತ್ತು ವಿಶ್ವವಿದ್ಯಾಲಯಗಳಲ್ಲಿ ಮಾನ್ಯ ಕುಲಪತಿಗಳ ಸಹಕಾರ ಅಗತ್ಯವಿದೆ ಎಂದರು.

ನಂತರ ಮುಖ್ಯ ಅತಿಥಿಗಳು ಹಾಗೂ ಗಣ್ಯರು ಸಸಿಗೆ ನೀರೆರೆಯುವುದರ ಮೂಲಕ ಸಭೆಯನ್ನು ಉದ್ಘಾಟಿಸಿದರು. ಮುಂದುವರೆದು ಮೈಸೂರು ಸಂಸ್ಥಾನದ ಮಹಾರಾಜರೂ ಹಾಗೂ ಸ್ಕೌಟ್-ಗೈಡ್ ಸಂಸ್ಥೆಯ ಪೋಷಕರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್ ಅವರ ಜನ್ಮ ಶತಮಾನೋತ್ಸವ ಆಚರಣೆ ಪ್ರಯುಕ್ತ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು.



ಸನ್ಮಾನ್ಯ ಸಚಿವರಾದ ಶ್ರೀ ಸುರೇಶ್ ಕುಮಾರ್‌ರವರು ತಮ್ಮ ಉದ್ಘಾಟನಾ ಭಾಷಣದಲ್ಲಿ "ಶಿಸ್ತು, ದೇಶಭಕ್ತಿ, ಆತ್ಮವಿಶ್ವಾಸ ಮಕ್ಕಳಲ್ಲಿ ಉಂಟುಮಾಡುವುದರಲ್ಲಿ ಸ್ಕೌಟ್-ಗೈಡ್ ಚಳವಳಿ ಪ್ರಮುಖ ಪಾತ್ರವಾಹಿಸುತ್ತಿದೆ. ಕರ್ನಾಟಕ ಸರ್ಕಾರವು ಸ್ಕೌಟ್-ಗೈಡ್ ಚಳವಳಿಯನ್ನು ವಿಸ್ತರಿಸಲು ಸಂಪೂರ್ಣ ಸಹಕಾರವನ್ನು ನೀಡುತ್ತದೆ" ಎಂದರು.



"ಕರ್ನಾಟಕ ದರ್ಶನ" ಕಾರ್ಯಕ್ರಮ ಸಂಸ್ಥೆಗೆ ಸಂಬಂಧಪಟ್ಟಂತೆ, ನೌಕರರ ನಿಯೋಜನೆ ಹಾಗು ಇತರ ವಿಷಯಗಳಿಗೆ ಸರ್ಕಾರದ ಬೆಂಬಲ ಮತ್ತು ಅನುಧಾನ ಮುಂದುವರೆಸಲಾಗುವುದು" ಎಂದು ತಿಳಿಸಿದರು. ಮುಂದುವರೆದು ಪ್ರಾಮಾಣಿಕತೆ ಮತ್ತು ಬದುಕುವ ರೀತಿ ಇವುಗಳನ್ನು "ಪ್ರಾಮಾಣಿಕತೆಯ ಅಂಗಡಿ ಮತ್ತು ನಾಲ್ಕು ಬಗೆಯ ಜನಗಳು" ಎಂಬ ಎರಡು ದೃಷ್ಟಾಂತಗಳ ಮೂಲಕ ವಿವರಿಸಿದರು.

ಮಾನ್ಯ ಮಾಜಿ ಸಚಿವರಾದ ಶ್ರೀ ಯು.ಟಿ. ಖಾದರ್ ಅವರು ಮಾತನಾಡುತ್ತಾ "ಸ್ಕೌಟ್–ಗೈಡ್‌ಗೆ ಸಂಬಂಧಿಸಿದಂತೆ ರೋವರ್–ರೇಂಜರ್ ಕಾರ್ಯಕ್ರಮಗಳಿಗೆ ಹೆಚ್ಚಿನ ಆದ್ಯತೆ ನೀಡಬೇಕಿದೆ, ನಮ್ಮ ದೇಶ ಬಲಿಷ್ಠವಾಗಬೇಕಾದರೆ ವ್ಯಕ್ತಿತ್ವ ಬೆಳೆಸುವ ಆತ್ಮ ವಿಶ್ವಾಸವನ್ನು ಮಕ್ಕಳಲ್ಲಿ ಬೆಳೆಸುವ ಕೆಲಸವಾಗಬೇಕು. ಇದಕ್ಕೆ ಜಾಗೃತಿಯನ್ನುಂಟು ಮಾಡಬೇಕು" ಎಂದು ಹೇಳಿದರು.



ಹಿರಿಯ ಸಾಹಿತಿಗಳೂ ಹಾಗೂ ಸಂಸ್ಥೆಯ ಪ್ರಕಟಣಾ ಸಮಿತಿಯ ಅಧ್ಯಕ್ಷರಾದ ಡಾ॥ ಗೊ.ರು. ಚನ್ನಬಸಪ್ಪ ಅವರು ಮಾತನಾಡಿ "ಸಮಾಜವು ಮಕ್ಕಳ ಮೇಲೆ ಹೆಚ್ಚಿನ ಗಮನವನ್ನು ಹರಿಸಬೇಕು. ಅವರಲ್ಲಿ ಜೀವಕಾರುಣ್ಯ ಮತ್ತು ಮಾನವೀಯ ಮೌಲ್ಯಗಳನ್ನು ಉದ್ದೀಪಿಸಬೇಕು ಎಂದರು.

ಮುಖ್ಯ ಅತಿಥಿಗಳು ನಿರ್ಗಮಿಸಿದ ನಂತರ ಸಭೆಯ ಕಾರ್ಯಸೂಚಿಯಂತೆ ಕಲಾಪ ನಡೆಸಲಾಯಿತು. ಅಧ್ಯಕ್ಷರ ಭಾಷಣಕ್ಕೆ ಮುನ್ನ ರಾಜ್ಯ ಮುಖ್ಯ ಆಯುಕ್ತರು ಮಾತನಾಡುತ್ತಾ ಶ್ರೀ ಹೆಚ್.ಡಿ. ಕುಮಾರಸ್ವಾಮಿ, ಮಾನ್ಯ ಮಾಜಿ ಮುಖ್ಯ ಮಂತ್ರಿಗಳು ಕಳೆದ ವರ್ಷ 100ನೇ ರಾಜ್ಯ ಪರಿಷತ್ ಮಹಾಸಭೆಯನ್ನು ಉದ್ಘಾಟಿಸಿ ಚಳವಳಿಯ ಬೆಳವಣಿಗೆಗೆ ಹೆಚ್ಚಿನ ಸಹಕಾರ ಹಾಗೂ ಅನುದಾನವನ್ನು ನೀಡಿರುವುದನ್ನು ಸ್ಮರಿಸಿದರು.



ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಶಾಂತಿಗೃಹ ಆವರಣದಲ್ಲಿ ಬಿ.ಬಿ.ಎಂ.ಪಿ. ಜಿಲ್ಲಾ ಸಂಸ್ಥೆಗೆ ಕಟ್ಟಡವನ್ನು ನಿರ್ಮಿಸಲು ರೂ 1 ಕೋಟಿ ಅನುದಾನವನ್ನು ನೀಡಿರುವುದಕ್ಕೆ ಧನ್ಯವಾದದ ಪತ್ರಬರೆಯಲಾಗುವುದೆಂದರು.

"ಯುವ ಜನತೆಗೆ ಅವಶ್ಯಕವಿರುವ ಕಾರ್ಯಕ್ರಮಗಳು ತರಬೇತಿ ಮತ್ತು ಚಟುವಟಿಕೆಗಳನ್ನು ಆಯೋಜಿಸಿ, ಚಳವಳಿಯತ್ತ ಆಕರ್ಷಿತರಾಗುವಂತೆ ಮಾಡಬೇಕು. ಭಾರತ ಸೇವಾದಳ, ಎನ್.ಎಸ್.ಎಸ್., ಇಂಡಿಯನ್ ರೆಡ್ ಕ್ರಾಸ್, ಎನ್.ಸಿ.ಸಿ. ಅವರುಗಳ ಸಹಯೋಗದೊಂದಿಗೆ ಕಾರ್ಯಕ್ರಮಗಳನ್ನು ಆಯೋಜಿಸಬೇಕು. ಎಸ್.ಡಿ.ಜಿ. (Sustainable Development Goals) ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಬೇಕು." ಎಂದು ತಿಳಿಸಿದರು.

"ರಾಜ್ಯ ಸಂಸ್ಥೆಯ, ಜಿಲ್ಲಾ ಸಂಸ್ಥೆಯ ಮತ್ತು ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ತಮ್ಮ ವ್ಯಾಪ್ತಿಯ ಶಾಲಾ–ಕಾಲೇಜುಗಳಿಗೆ ಭೇಟಿ ನೀಡಿ ಸೂಕ್ತ ಸಲಹೆ–ಸೂಚನೆ ನೀಡಬೇಕು" ಎಂದು ತಿಳಿಸಿದರು.



ಸಭೆಯ ಅಧ್ಯಕ್ಷತೆ ವಹಿಸಿದ್ದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರು ಮಾತನಾಡುತ್ತಾ ಸ್ಕೌಟ್–ಗೈಡ್ ಚಳವಳಿಗೆ ಪರಂಪರೆ ಇತಿಹಾಸ ಹಾಗೂ ಶಕ್ತಿ ಇದ್ದು ಅದನ್ನು ಬೆಳೆಸಬೇಕಾಗಿದೆ. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಜಿಲ್ಲೆಯ ಎಲ್ಲಾ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು. ರಾಜ್ಯ ಸಂಸ್ಥೆಯಿಂದ ಬಿಡುಗಡೆಯಾದ ಅನುದಾನಗಳಿಗೆ ಸಂಬಂಧಿಸಿದಂತೆ ಲೆಕ್ಕ ಪತ್ರಗಳನ್ನು ಸಮರ್ಪಕವಾಗಿ ರಾಜ್ಯ ಸಂಸ್ಥೆಗೆ ಸಲ್ಲಿಸಬೇಕು ಹಾಗೂ ಸಂಸ್ಥೆಗಳನ್ನು ಬಲಪಡಿಸಬೇಕೆಂದು ಕೋರಿದರು.

ಶ್ರೀ ಎಂ. ಪ್ರಭಾಕರ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌ) ಅವರು ಧನ್ಯವಾದಗಳನ್ನು ಸಲ್ಲಿಸಿದರು. ನಂತರ 2018–19 ನೇ ಸಾಲಿನಲ್ಲಿ ಉತ್ತಮ ಕಾರ್ಯನಿರ್ವಹಿಸಿದ ಜಿಲ್ಲೆಗಳಿಗೆ ಪರ್ಯಾಯ ಫಲಕ ಮತ್ತು ಪ್ರಶಸ್ತಿಗಳನ್ನು ನೀಡಲಾಯಿತು.

## ರಾಜ್ಯ ಮಟ್ಟದ ಪ್ರಶಸ್ತಿಗಳು



ಪ್ರಥಮ ಸ್ಥಾನ –ದಕ್ಷಿಣ ಕನ್ನಡ
**ಅಬ್ದುಲ್ ಗಫಾರ್ ಪರ್ಯಾಯ ಫಲಕ**



ದ್ವಿತೀಯ ಸ್ಥಾನ –ಕೋಲಾರ
**ಜಸ್ಟೀಸ್ ಶಂಕರನಾರಾಯಣರಾವ್ ಪರ್ಯಾಯ ಫಲಕ**



ತೃತೀಯ ಸ್ಥಾನ –ಬೆಳಗಾವಿ
**ಮೇಜರ್ ವೈ.ವಿ.ಕೆ ಮೂರ್ತಿ ಪರ್ಯಾಯ ಫಲಕ**

# ವಿಭಾಗ ಮಟ್ಟದ ಪರ್ಯಾಯ ಫಲಕ – ಪ್ರಶಸ್ತಿಗಳು

## ಬೆಂಗಳೂರು ವಿಭಾಗ



ಪ್ರಥಮ ಸ್ಥಾನ –ಬೆಂಗಳೂರು ದಕ್ಷಿಣ ಜಿಲ್ಲೆ

**ವಿ.ಪಿ. ದೀನದಯಾಳು ನಾಯ್ಡು ಪರ್ಯಾಯ ಫಲಕ**



ದ್ವಿತೀಯ ಸ್ಥಾನ –ದಾವಣಗೆರೆ ಜಿಲ್ಲೆ



ತೃತೀಯ ಸ್ಥಾನ –ಬೆಂಗಳೂರು ಉತ್ತರ ಜಿಲ್ಲೆ

## ಮೈಸೂರು ವಿಭಾಗ



ಪ್ರಥಮ ಸ್ಥಾನ –ಮೈಸೂರು ಜಿಲ್ಲೆ

**ಜೆ.ಬಿ. ಮಲ್ಲಾರಾಧ್ಯ ಪರ್ಯಾಯ ಫಲಕ**



ದ್ವಿತೀಯ ಸ್ಥಾನ –ಉಡುಪಿ ಜಿಲ್ಲೆ



ತೃತೀಯ ಸ್ಥಾನ –ಚಾಮರಾಜನಗರ ಜಿಲ್ಲೆ

## ಬೆಳಗಾವಿ ವಿಭಾಗ



ಪ್ರಥಮ ಸ್ಥಾನ –ಹಾವೇರಿ ಜಿಲ್ಲೆ

**ಕೊಂಡಜ್ಜಿ ಬಸಪ್ಪ ಪರ್ಯಾಯ ಫಲಕ**



ದ್ವಿತೀಯ ಸ್ಥಾನ –ಧಾರವಾಡ ಜಿಲ್ಲೆ



ತೃತೀಯ ಸ್ಥಾನ –ವಿಜಯಪುರ ಜಿಲ್ಲೆ

## ಕಲಬುರಗಿ ವಿಭಾಗ



ಪ್ರಥಮ ಸ್ಥಾನ –ಕಲಬುರಗಿ ಜಿಲ್ಲೆ

**ಪ್ರೊ. ಪಿ. ಶಿವಶಂಕರ್ ಪರ್ಯಾಯ ಫಲಕ**



ದ್ವಿತೀಯ ಸ್ಥಾನ –ಬೀದರ್ ಜಿಲ್ಲೆ



ತೃತೀಯ ಸ್ಥಾನ –ರಾಯಚೂರು ಜಿಲ್ಲೆ

# ROVERS & RANGERS RENDER SERVICE FOR INTERNATIONAL SWIMMING CHAMPIONSHIP

## Making History

The Bharat Scouts & Guides Karnataka was chosen our organisation to depute volunteers for the Prestigious International Age Group Aquatic Championship Event hosted in Namma Bengaluru by Karnataka Swimming Association in with the support of Govt.of Karnataka, Asian Swimming Association, Swimming Association of India from 22nd September - 02 October 2019

## Action Plan

The Team at SHQ headed by State Chief Commissioner decided to Recruit 150 Rovers & Rangers for the task & depute them in 2 batches for service

1. Team Formation
2. Appointment of Team Coordinator's
3. Recce visit to venues
4. Daily attendance ,pick up & Drop coordination.

## Venue

1) Sports Authority of India, SAI

2) Padukone Dravid Centre CSE
3) Kensington Swimming Pool

Report by : Krishna Raj
HWB(S)



Sri P.G.R. Sindhia, State Chief Commissioner addressed the Participants of Orientation Meets held at SHQ on 18, september 2019.

## Numbers & Facts

> India wins 64 medals in the Championship.

> 1st International Swimming Championship Hosted in Karnataka & Scouts given incharge to depute volunteers.

> 1500+ Participants from 18 Countries Across Asia.

> 11Days ,149 Volunteers from 3 Districts, 14 Colleges, Volunteered in 2 batches for 12+ Departments.

> 19,668 Hours of Service. Average 132 Hours per Volunteer.

> Awesome feedback & appreciation to Scouting Fraternity by Organisers & Participants of the championship.

## WHO MADE IT HAPPEN….!!

The successful completion of the event credit goes to the President of Karnataka Swimming Association Mr. Gopal Hosur, Retd. IPS Officer Mr. Sathish & the Organising Committee.

The BS&G State Association is thankful to Department of Collegiate Education Govt. of Karnataka. Heads of the Institutions, Office Bearers of BS&G Bangalore North, South & BBMP Districts, Rover Scout Leaders & Ranger Leaders for their support.

# Regional Level Rover, Ranger Symposium to Commemorate 150th Birth Anniversary of Mahatma Gandhi



The Bharat Scouts and Guides Southern Region Organised Regional Level Rover, Ranger Symposium to Commemorate 150th Birth Anniversary of Mahatma Gandhi at State Headquarters, BSG, Karnataka, Shanti Gurha, Palace Road, Bengaluru from Sept 29 to Oct 03, 2019. 76 Participants and Staff from 05 Regional States of Andhra Pradesh, Karnataka, Kerala, Southern Railway and Telangana took part. The event was formally opened on 29th Sept 2019 after Flag Ceremony followed by Integration session. Sri P.G.R. Sindhia, State Chief Commissioner, BS&G Karnataka Inaugurated the event with Lighting of Lamp. Floral Tributes paid to the photo of Mahatma Gandhi . Sri Kondajji B. Shanmukhappa, National Executive Member, Shri B. K. Basavaraja, Joint State Secretary, BSG, Karnataka State were Guests of Honor.

All of them blessed the Rovers and Rangers and spoke about the importance of Gandhi Jayanthi.

On 30th Sept, the Sustainable Development Goals, Youth Forum - "Gandhiji an inspiration", Quiz Competition, Slogan Writing, Extempore Speech– GandhiJi's Ideologies, Drawing Competition, Video Show, Bhajan etc were organized. On 30th evening all the participants were taken to Freedom Park. The Rovers and Rangers Studied the History of Central Prison of Karnataka and also did Swachhata Activity at Freedom Park. In the night Rovers and Rangers practiced and learnt Vyshanava Janato Bhajan song. All Faith Prayer was organised in front of the Statue of Mahatma Gandhi Near Vidhana Soudha on 02nd October 2019 at 09.00 am. It was witnessed by Hon'ble Chief Minister of Karnataka Sri B.S. Yadiyurappa, Sri R. Ashok, Hon'ble Minister of Revenue, Sri S. R. Vishwanath, MLA, Sri Goutam Kumar Jain, Mayor of Bengaluru and other dignitaries. Chief Minister Garlanded the Photo of Mahatma Gandhi. After that all the participatents moved towards High Court of Karnataka to do



'SWACHHATA' programme with the permission of Chief Justice of Karnataka High Court. Sri Abhay S. Oka. Then Peace March Started from High Court and passed through Cubbon Park, M.G. Road Junction, Kasturba Road, State Central Library, K.R. Circle and reached BSG, SHQ, Bengaluru. Smt. Saroja P., former Director, BS&G was also present and at the end she gave a talk on Ideology of Mahatma Gandhi. On Oct 3rd Valedictory Function was organised. Sri P.G.R. Sindhia, State Chief Commissioner, BSG, Karnataka was Chief Guest. He Spoke and higlighted the role of Mahatma Gandhi in the Freedom Struggle. Smt. B.V. Ramalatha, Joint State Secretary(G) and Smt. P. Saroja, Former Director of BSG were guest of honor. The camp came to an end on 03rd October 2019. The event was organized by Smt. Kumud Mehra, Assistant Director, Southern Region duly assist by Sri M. Prabhakar Bhat, SOC(S), Smt. Subha .S, LT(R), Smt. Shanta Kumari, Pre-ALT(R) , Sri Krishna Raj, HWB(S) from Karnataka State, Smt. Radhika Triveni, HWB(R) from Andhra Pradesh State.

# ಜಯವೆನ್ನಿ

**ದೇವೇಂದ್ರ ಕಟ್ಟಿಮನಿ**
ಸರಕಾರಿ ಪ್ರೌಢಶಾಲೆ, ಇಡಪನೂರು
ರಾಯಚೂರು ಜಿಲ್ಲೆ

ಜಯವೆನ್ನಿ, ಜಯವೆನ್ನಿ, ಜಯವೆನ್ನಿ, ಜಯವೆನ್ನಿ, ಜಯವೆನ್ನಿ
ಜಯವೆನ್ನಿ ನಮ್ಮ ಸ್ಕೌಟು ಗೈಡಿಗೆ, ಜಯವೆನ್ನಿ, ಜಗಗೆದ್ದ ಸೇವಕಗೆ ॥ಪ॥

ಬೆಳಗಿನ ಬಿಪಿ ವ್ಯಾಯಾಮ ಇರಲು, ಬರುವುದೆ ಇಲ್ಲ ಯಾವ ರೋಗವು
ಏ.. ಮೆರೆಯಲಿ ಭಾರತ ವಿಶ್ವದಲಿ, ಭಾರತ ಸ್ಕೌಟು ಗೈಡಿನಲಿ ॥೧॥

ಬಂದಿದೆ ನೋಡು ಎಲ್ಲ ಶಾಲೆಯಲಿ, ಸೇರಲಿ ಮಕ್ಕಳು ಇಂದಿನಿಂದಲೆ
ಬಂದು ಭಾರತದ ಸೇವೆ ಮಾಡಲು, ನೊಂದ ಜನರಿಗೆ ಬಂಧುವಾಗಲು ॥೨॥

ವನವಿದ್ಯಾವದು ನಾವು ಕಲಿತೆವು, ಶಿಬಿರಾಗ್ನಿಯಲಿ ನಾವು ಕುಣಿದೆವು
ವನ್ಯ ಜೀವಿಗಳ ನಾವು ಉಳಿಸಲು, ಎಲ್ಲ ಕಾಲದಲಿ ಸದಾಸಿದ್ದರು ॥೩॥

ಶಿಸ್ತಿನ ಜೀವನ ಸ್ಕೌಟಲಿ ಉಂಡು, ಸರ್ವಧರ್ಮದಲಿ ಶಾಂತಿಯ ಕಂಡು
ಶಿಬಿರವಾಸದಲಿ ವಿಶ್ವವೆ ದಂಡು ವಿಶ್ವಮಾನವರು ಒಂದಾಗಲಿ ಎಂದು ॥೪॥

## ಅಭಿನಂದನೆಗಳು



**ಶ್ರೀ ಶ್ರೀನಿವಾಸ್**, ರೋವರ್ ಸ್ಕೌಟ್ ಲೀಡರ್, ಉಪನ್ಯಾಸಕರು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಿದ್ದಕಟ್ಟೆ, ಬಂಟ್ವಾಳ, ದ.ಕ.ಜಿಲ್ಲೆ ಇವರು ತಮಿಳುನಾಡಿನ, ತಿರುಚನಾಪಳ್ಳಿಯ 'ಭಾರತಿ ದಾಸನ್ ವಿಶ್ವವಿದ್ಯಾನಿಲಯ'ದಲ್ಲಿ ಅಕ್ಟೋಬರ್ 01, 2019 ರಂದು "Mapping of Research Productivity in Green Economics: A Biliometric Study" ಎಂಬ ಪ್ರಬಂದಕ್ಕೆ ಪಿಹೆಚ್.ಡಿ. ಪದವಿಯನ್ನು ಪಡೆದಿರುತ್ತಾರೆ. ಇವರಿಗೆ ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಸಂಸ್ಥೆಯಿಂದ ಅಭಿನಂದನೆಗಳು.

– ರಾಜ್ಯ ಕಾರ್ಯದರ್ಶಿ

# ಜಿಲ್ಲಾ ವಾರ್ತೆಗಳು

### ವಿಜಯಪುರ –ಆಲಮಟ್ಟಿ ಅಣೆಕಟ್ಟು

ಆಲಮಟ್ಟಿ ಅಣೆಕಟ್ಟನ್ನು ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನಲ್ಲಿ ನಿರ್ಮಿಸಲಾಗಿದೆ. ಆಲಮಟ್ಟಿಯಿಂದ 2 ಕಿ.ಮೀ. ಆಲಮಟ್ಟಿ ಅಣೆಕಟ್ಟು ಇದೆ. ಜಲಾಶಯದ ಗರಿಷ್ಠ ಮಟ್ಟ ಸಮುದ್ರ ಮಟ್ಟದಿಂದ 1705.3272 ಅಡಿ. ಕೃಷ್ಣಾ ನದಿಗೆ ಕಟ್ಟಲಾಗಿದೆ. ಇದನ್ನು 2010ರಲ್ಲಿ ಭಾರತದ ಮಾಜಿ ರಾಷ್ಟ್ರಪತಿಗಳಾದ ಶ್ರೀ ಎ.ಪಿ.ಜೆ. ಅಬ್ದುಲ್ ಕಲಾಮ್‌ರವರು ಉದ್ಘಾಟಿಸಿದರು. ಇದು ಆರಂಭಗೊಂಡಿದ್ದು 2005ರಲ್ಲಿ. ಇದರ ಪ್ರದೇಶ 33,375 ಕಿ.ಮೀ

## ಬಳ್ಳಾರಿ

ಸೆಪ್ಟೆಂಬರ್ 27 ರಂದು ಸ್ಥಳೀಯ ಸಂಸ್ಥೆ ಕೂಡ್ಲಿಗಿ ವತಿಯಿಂದ ಕೂಡ್ಲಿಗಿ ತಾಲ್ಲೂಕು ಶಿವಪುರ ಗ್ರಾಮದಲ್ಲಿ ಜಂತುಹುಳು ನಿವಾರಣಾ ಮಾತ್ರೆ ಉಪಯೋಗದ ಬಗ್ಗೆ ಜನರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ಸ್‌ಗಳಿಂದ ಜಾಥಾ ಮಾಡುವುದರ ಮೂಲಕ ಮನೆಮನೆಗೆ ತೆರಳಿ ಪೋಷಕರಿಗೆ ಮನವರಿಕೆ ಮಾಡಿಕೊಡಲಾಯಿತು. ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಟಿ. ತಿಂದಪ್ಪ ಹಾಗೂ ಶಾಲೆಯ ಮುಖ್ಯ ಗುರುಗಳಾದ ಶ್ರೀ ನಾಗಲಿಂಗಾಚಾರಿ, ಸ್ಕೌಟ್ಸ್‌ಗಳು ಮತ್ತು ಶಿಕ್ಷಕರು ಪಾಲ್ಗೊಂಡಿದ್ದರು.



* ಅಕ್ಟೋಬರ್ 2 ರಂದು ಸ್ಥಳೀಯ ಸಂಸ್ಥೆ ಕೂಡ್ಲಿಗಿ ವತಿಯಿಂದ ಸರಕಾರಿ ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆ ಶಿವಪುರ ಸ್ಕೌಟ್ಸ್ ಮತ್ತು ಇತರೆ ಮಕ್ಕಳೊಂದಿಗೆ ಮಹಾತ್ಮ ಗಾಂಧೀಜಿಯವರ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರಿ ಅವರ ಜನ್ಮ ದಿನಾಚರಣೆಯನ್ನು ಆಚರಿಸಿ ನಂತರ ಸ್ವಚ್ಛ ಭಾರತ ಅಭಿಯಾನದ ಅಡಿಯಲ್ಲಿ ಶ್ರಮದಾನ ಮಾಡಲಾಯಿತು. ಕಾರ್ಯಕ್ರಮದಲ್ಲಿ ಗ್ರಾಮ ಪಂಚಾಯಿತಿ ಅಧ್ಯಕ್ಷರಾದ ಶ್ರೀಮತಿ ಹಳ್ಳಿ ಶಾಂತಮ್ಮ ಹಾಗೂ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳಾದ ಶ್ರೀಮತಿ ಮಂಗಳಗೌರಿ ಎಸ್.ಡಿ.ಎಂ.ಸಿ.



ಅಧ್ಯಕ್ಷರು, ಸದಸ್ಯರು ಹಾಗೂ ಸರಕಾರಿ ಪ್ರೌಢಶಾಲೆ ಮತ್ತು ಪ್ರಾಥಮಿಕ ಶಾಲೆಯ ಮುಖ್ಯ ಗುರುಗಳು ಹಾಗೂ ಎಲ್ಲಾ ಶಿಕ್ಷಕರು ಭಾಗವಹಿಸಿದ್ದರು.

## ಬೆಳಗಾವಿ

ಸೆಪ್ಟೆಂಬರ್ 5 ರಂದು ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ ರವರ ಜನ್ಮ ದಿನಾಚರಣೆ ಅಂಗವಾಗಿ ಬೆಳಗಾವಿ ಹಾಗೂ ಚಿಕ್ಕೋಡಿ ಜಿಲ್ಲೆಗಳಲ್ಲಿ ಆಯೋಜಿಸಿದ ಜಿಲ್ಲಾಮಟ್ಟದ ಶಿಕ್ಷಕರ ದಿನಾಚರಣೆ ಕಾರ್ಯಕ್ರಮದ ವೇದಿಕೆಯಲ್ಲಿ ಉತ್ತಮ ಸ್ಕೌಟ್ ಮಾಸ್ಟರ್, ಉತ್ತಮ ಗೈಡ್ ಕ್ಯಾಪ್ಟನ್ ಪ್ರಶಸ್ತಿಗಳನ್ನು ನೀಡಿ ಗೌರವಿಸಲಾಯಿತು. ಪ್ರಶಸ್ತಿ ಪಡೆದ ಶಿಕ್ಷಕರುಗಳು ಬೆಳಗಾವಿಯ



ಶ್ರೀ ಎಂ.ಎನ್. ಗವನ್ನವರ, ಶ್ರೀಮತಿ ಪಿ.ಸಿ. ಡಯಾಸ್ ಶ್ರೀಮಹೇಶ ಪೂಜಾರ, ಶ್ರೀಮತಿ ಪಲ್ಲವಿ ನಾಡಕರ್ಣಿ ಚಿಕ್ಕೋಡಿಯ ಶ್ರೀ ಕೆ.ಎಲ್. ಖೋತ, ಶ್ರೀ ವೈಕೆ. ಭಜಂತ್ರಿ ಶ್ರೀ ಶಿವಾನಂದ ಸನದಿ, ಶ್ರೀಮತಿ ರೂಪಾ ರಾಯಮಾನೆ ಶ್ರೀ ವೈ.ಬಿ. ಸಣ್ಣಲಗಮನ್ನವರ ಮತ್ತು ಶ್ರೀಮತಿ ಎಸ್.ಬಿ. ಬಡ್ಲಿ.

ಪ್ರಶಸ್ತಿ ಹಾಗೂ ಸನ್ಮಾನ ಸ್ವೀಕರಿಸಿದ ಎಲ್ಲ ಸ್ಕೌಟ್ ಮಾಸ್ಟರ್ಸ್ – ಗೈಡ್ ಕ್ಯಾಪ್ಟನ್‌ಗಳನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಿ.ಬಿ. ಮನ್ನಿಕೇರಿ, ಜಿಲ್ಲಾ ಸ್ಕೌಟ್–ಗೈಡ್ ಆಯುಕ್ತರುಗಳು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಅಭಿನಂದಿಸಿದರು.

* ಸೆಪ್ಟೆಂಬರ್ 18 ರಂದು ಜಿಲ್ಲಾ ಸಂಸ್ಥೆ ಬೆಳಗಾವಿ ವತಿಯಿಂದ 2019–20ನೇ ಸಾಲಿನ ಜಿಲ್ಲಾಮಟ್ಟದ "ದೇಶ ಭಕ್ತಿಗೀತೆ"ಗಳ ಗೀತಗಾಯನ ಸ್ಪರ್ಧೆಯು ನಗರದ ಕೆ.ಎಲ್.ಎಸ್. ಆಂಗ್ಲ ಮಾಧ್ಯಮ ಶಾಲೆ, ಟಿಳಕವಾಡಿ ಬೆಳಗಾವಿಯಲ್ಲಿ ಜರುಗಿತು.

ಸಮಾರಂಭದ ಅಧ್ಯಕ್ಷತೆಯನ್ನು ಶಾಲೆಯ ಮುಖ್ಯೋಪಾಧ್ಯಾಯಿನಿಯರಾದ ಶ್ರೀಮತಿ ನಂದಿನಿ ಮುತಾಲಿಕ ದೇಸಾಯಿ ಇವರು ವಹಿಸಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ನಗರ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಳಾದ ಶ್ರೀ ಕೆ.ಡಿ. ಬಡಿಗೇರ ಇವರು ಜ್ಯೋತಿ ಬೆಳಗಿಸುವುದರ ಮೂಲಕ ನೆರವೇರಿಸಿದರು. ಶ್ರೀ ಆರ್. ಜಿ ಚಳಗೇರಿ, ಕ್ಷೇತ್ರ ಸಮನ್ವಯಾಧಿಕಾರಿ, ಬೆಳಗಾವಿ ನಗರ, ಶ್ರೀಮತಿ ಸಾರಿಕಾ ನಾಯಕ, ಪ್ರಾಥಮಿಕ ವಿಭಾಗದ ಮುಖ್ಯೋಪಾಧ್ಯಾಯಿನಿ, ಶ್ರೀಮತಿ ಪ್ರಭಾವತಿ ಪಾಟೀಲ, ಜಿಲ್ಲಾ ಆಯುಕ್ತರು, ಗೈಡ್ ಉಪಸ್ಥಿತರಿದ್ದರು. ಶ್ರೀ ಎಸ್.ಎಂ. ನದಾಫ, ಜಿಲ್ಲಾ ಕಾರ್ಯದರ್ಶಿ, ಸ್ಕೌಟ್ ಮಾಸ್ಟರ್ ಶ್ರೀ ಸುಕುಮಾರ ಘಟ್ಟದ ಕಾರ್ಯಕ್ರಮ ನಿರೂಪಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ ಸ್ವಾಗತಿಸಿದರು. ಎ.ಎಸ್.ಓ.ಸಿ., ಶ್ರೀ ಡಿ.ಬಿ. ಅತ್ತಾರ ವಂದನಾರ್ಪಣೆ ಸಮರ್ಪಿಸಿದರು.

* ಮಹಾತ್ಮಾ ಗಾಂಧೀಜಿಯವರ 150ನೇ ಜನ್ಮದಿನಚರಣೆಯ ಅಂಗವಾಗಿ ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯ ಬನ್ನೀಸ್, ಕಬ್ಸ್, ಬುಲ್‌ಬುಲ್ಸ್ ಮತ್ತು ಸ್ಕೌಟ್–ಗೈಡ್‌ಗಳು ಹಾಗೂ ಎಲ್ಲಾ ಶಿಕ್ಷಕ ವೃಂದದವರು ಸರ್ವಧರ್ಮ ಪ್ರಾರ್ಥನೆಯಲ್ಲಿ ಪಾಲ್ಗೊಂಡಿದ್ದರು. ಈ ಸಂದರ್ಭದಲ್ಲಿ ಸ್ವಚ್ಛತಾ ಆಂದೋಲನವನ್ನು ಹಮ್ಮಿಕೊಳ್ಳಲಾಗಿತ್ತು ಶಾಲಾ ಆವರಣವನ್ನು ಮತ್ತು ವರ್ಗಕೋಣೆಗಳನ್ನು ಶುಚಿಗೊಳಿಸಲಾಯಿತು.



ಸರ್ವಧರ್ಮ ಪ್ರಾರ್ಥನೆಯಲ್ಲಿ ಶಾಲಾ ಪ್ರಾಚಾರ್ಯರಾದ ಶ್ರೀಮತಿ ಅನುಪಾ ಕೌಶಿಕ್ ಹಾಗೂ ದಳನಾಯಕಿಯರುಗಳು ಉಪಸ್ಥಿತರಿದ್ದರು.

## ಬೆಂಗಳೂರು ದಕ್ಷಿಣ

Vijayanagar Local Association conducted Preparatory cum Testing camp for Scouts-Guides, Cubs and Bulbuls on 6th August to 8th August at Milind Public School, Spoorthidhama, Anjananagar, Bangalore

Scouts - 278, Guides - 176, Cubs - 105, Bulbuls-83, Unit Leaders 44, Service Scout/Guides 23 participated. Examiners were Sri G. Sathish (Scout) Smt. Jayalakshmi (Guides) Sri Y.C. Prashanth (Cubs) Smt. Usha (Bulbul) and the Chief Guest was Sri S. Raju, Secretary of Milind Public School, Sri P. Palani, D.C.(S), Sri T.K. Narayan Swamy, D.T.C.(S) Sri Prasad and Sri Shekar participated Sri T. Siddagangaih L.A. Secretary welcomed the guests.



## ಬೆಂಗಳೂರು ಪೂರ್ವ

ಸರ್ವಧರ್ಮ ಸಮಾನತೆ ಹಾಗೂ ಐಕ್ಯತೆ ಮಹಾತ್ಮಾ ಗಾಂಧೀಜಿಯವ ಆಧ್ಯತೆ ಆಗಿತ್ತು ಎಂದು ಭಾರತ್ ಸ್ಕೌಟ್ಸ್-ಗೈಡ್ಸ್ ಪ್ರಭಾರಿ ರಾಜ್ಯ ಸ್ಕೌಟ್ ಆಯುಕ್ತರಾದ ಶ್ರೀ ಎನ್. ಶ್ರೀನಿವಾಸನ್ ನುಡಿದರು. ಪಟ್ಟಣದ ಸರಸ್ವತಿ ವಿದ್ಯಾಮಂದಿರ ಶಾಲೆಯಲ್ಲಿ ಮಹಾತ್ಮಾ ಗಾಂಧೀಜಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರೀಜಿರವರ ಜನ್ಮ ದಿನಾಚರಣೆ ಅಂಗವಾಗಿ ಆಯೋಜಿಸಿದ್ದ ಸರ್ವಧರ್ಮ ಪ್ರಾರ್ಥನೆ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡುತ್ತಿದ್ದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರಕುಮಾರ್ ಮಾತನಾಡಿ ಮಹಾತ್ಮಾ ಗಾಂಧೀಜಿಯವರು ಪಾಲಿಸುತ್ತಿದ್ದ ಶಾಂತಿ ಮತ್ತು ಸತ್ಯ ಪಾಲನೆಗಳು ಅದೆಷ್ಟೋ ತಪಸ್ಸು ಮಾಡಿದರೆ ಬರುವ ಸದ್ಗುಣವಾಗಿದೆ ಎಂದು ನುಡಿದರು.



ಶಾಲಾ ಕಾರ್ಯದರ್ಶಿ ಶ್ರೀ ಎನ್. ಸುರೇಶ್ ಮಾತನಾಡಿ ಮಹಾತ್ಮಾ ಗಾಂಧೀಜಿಯವರ 150ನೇ ಜನ್ಮ ದಿನಾಚರಣೆಯಂದು ನಾವೆಲ್ಲರೂ ರಾಷ್ಟ್ರ ನಿರ್ಮಾಣದ ನಿಟ್ಟಿನಲ್ಲಿ ಕೆಲವು ಸಂಕಲ್ಪ ಮಾಡಬೇಕಿದೆ. ತ್ಯಾಗ ಬಲಿದಾನದ ಫಲವಾಗಿ ಲಭಿಸಿರುವ ಸ್ವಾತಂತ್ರ್ಯವನ್ನು ದುರುಪಯೋಗ ಮಾಡಿಕೊಳ್ಳದೆ ಅದನ್ನು ಸ್ವಸ್ಥ ಹಾಗೂ ಸುಂದರ ರಾಷ್ಟ್ರ ನಿರ್ಮಾಣಕ್ಕಾಗಿ ಬಳಸಿಕೊಳ್ಳಬೇಕಿದೆ ಎಂದು ನುಡಿದರು.

ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ಭಾಗ್ಯ ಶ್ರೀನಿವಾಸ್ ಮೊದಲಾದವರು ಉಪಸ್ಥಿತರಿದ್ದರು.

* ನಮ್ಮ ಪರಿಸರವನ್ನು ಸದಾ ಸ್ವಚ್ಛ ಹಾಗೂ ಸುಂದರವಾಗಿಟ್ಟುಕೊಳ್ಳುವುದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯವಾಗಿದೆ ಎಂದು ಪ್ರಭಾರಿ ರಾಜ್ಯ ಆಯುಕ್ತರಾದ ಶ್ರೀ ಎನ್. ಶ್ರೀನಿವಾಸನ್ ನುಡಿದರು.

ಪಟ್ಟಣದ ತಿಮ್ಮರಾಯಸ್ವಾಮಿ ದೇವಾಲಯದ ಆವರಣದಲ್ಲಿ ಮಹಾತ್ಮಾ ಗಾಂಧೀಜಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರೀಜಿಯವರ ಜನ್ಮ ದಿನಾಚರಣೆ ಪ್ರಯುಕ್ತ



ವಿಶ್ವಚೇತನ ಪ್ರಥಮದರ್ಜೆ ಕಾಲೇಜಿನ ರೋವರ್ ಹಾಗೂ ರೇಂಜರ್‌ಗಳಿಂದ ಹಮ್ಮಿಕೊಂಡಿದ್ದ ಸ್ವಚ್ಛ ಭಾರತ್ ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರು ಮಾತನಾಡುತ್ತಿದ್ದರು.

ಸಂಸ್ಥೆಯ ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎನ್ ನರೇಂದ್ರ ಕುಮಾರ್ ಮಾತನಾಡಿ ಆರೋಗ್ಯಕರ ಜೀವನ ನಡೆಸಲು ಸ್ವಚ್ಛ, ಸ್ವಾಸ್ಥ್ಯ ಪರಿಸರದ ಅವಶ್ಯಕತೆ ಇದೆ. ಗ್ರಾಮಗಳ ಅಭಿವೃದ್ಧಿಯಿಂದಲೇ ದೇಶದ ಅಭಿವೃದ್ಧಿ ಸಾಧ್ಯ ಎಂದು ಗಾಂಧೀಜಿಯವರು ಹೇಳಿದ್ದಾರೆ. ಅಭಿವೃದ್ಧಿ ಎಂದರೆ ಕಟ್ಟಡ. ರಸ್ತೆ, ಕಛೇರಿಗಳು ಅಷ್ಟೆ ಅಲ್ಲ ಬದಲಿಗೆ ನಾಗರೀಕತೆ, ಸ್ವಚ್ಛತೆ, ಸಾಕ್ಷರತೆ ಹಾಗೂ ಸುಂದರವಾದ ಪರಿಸರವೂ ಸಹ ಇರಬೇಕು ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ವಿಶ್ವಚೇತನ ಪ್ರಥಮದರ್ಜೆ ಕಾಲೇಜಿನ ಪ್ರಾಂಶುಪಾಲ ಶ್ರೀ ಪ್ರಕಾಶ್ ರೆಡ್ಡಿ ಮಾತನಾಡಿ ನಾವು ಸಮವಸ್ತ್ರ ಧರಿಸಿದರೆ ಸಾಲದು. ಸ್ಕೌಟ್ಸ್-ಗೈಡ್ಸ್‌ನಲ್ಲಿ ಕಲಿಯುವ ಅನೇಕ ನೀತಿ ಮತ್ತು ನಿಯಮಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಪ್ರತಿನಿತ್ಯದ ಬದುಕಿನಲ್ಲಿ ಅದನ್ನು ಅಭ್ಯಾಸ ಮಾಡಬೇಕು. ಎಂದು ಕರೆ ನೀಡಿದರು. ಉಪನ್ಯಾಸಕರುಗಳಾದ ಶ್ರೀ ಯರ್ರಿಸ್ವಾಮಿ, ಶ್ರೀಮತಿ ಆಶಾ, ಶ್ರೀ ನಾರಾಯಣಸ್ವಾಮಿ ಮೊದಲಾದವರು ಉಪಸ್ಥಿತಿದ್ದರು.

* ಸೆಪ್ಟೆಂಬರ್ 24 ರಿಂದ 30 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ರಾಷ್ಟ್ರೀಯ ಸಂಸ್ಥೆಯವರು ಉತ್ತರಾಖಂಡ್‌ನ



ಡೆಹರಾಡೂನ್‌ನಲ್ಲಿ ರೋವರ್-ರೇಂಜರ್‌ಗಳಿಗೆ ರಾಷ್ಟ್ರಮಟ್ಟದ ಚಾರಣ ಮತ್ತು ಪರಿಸರ ಅಧ್ಯಯನ ಶಿಬಿರವನ್ನು ಏರ್ಪಡಿಸಿದ್ದರು.

ಬೆಂಗಳೂರು ಪೂರ್ವ ಜಿಲ್ಲೆಯ ಚಂದಾಪುರದ ಸ್ವಾಮಿ ವಿವೇಕಾನಂದ ಗ್ರಾಮಾಂತರ ಪದವಿ ಪೂರ್ವ ಕಾಲೇಜಿನ ರೋವರ್ ಸ್ಕೌಟ್ ಲೀಡರ್ ಶ್ರೀ ಎನ್. ಅಮೋಘವರ್ಷ, ರೋವರ್‌ಗಳಾದ ಬಸವರಾಜ, ಹೆಚ್. ಗುಜ್ಜರಗೌಡ ರೇಂಜರ್‌ಗಳಾದ ಎಂ. ಹರಿಣಿ, ಎಲ್ ಅನುಷಾರವರು ಸದರಿ ರಾಷ್ಟ್ರಮಟ್ಟದ ಶಿಬಿರದಲ್ಲಿ ಭಾಗವಹಿಸಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿ ಬಂದಿರುತ್ತಾರೆ.

* ಸೆಪ್ಟೆಂಬರ್ 30 ರಿಂದ ಅಕ್ಟೋಬರ್ 4ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್, ರಾಷ್ಟ್ರೀಯ ಸಂಸ್ಥೆಯವರು ಮಧ್ಯಪ್ರದೇಶದ ಪಚ್‌ಮಡಿಯ ರಾಷ್ಟ್ರೀಯ ತರಬೇತಿ ಕೇಂದ್ರದಲ್ಲಿ ರಾಷ್ಟ್ರಮಟ್ಟದ ವಿಶೇಷ ತರಬೇತಿ ಶಿಬಿರಗಳನ್ನು ಹಮ್ಮಿಕೊಂಡಿದ್ದರು. ಬೆಂಗಳೂರು ಪೂರ್ವ ಜಿಲ್ಲೆಯ ಚಂದಾಪುರದ ಸರ್ಕಾರಿ ಹಿರಿಯ ಪ್ರಾಥಮಿಕ ಪಾಠಶಾಲೆಯ ಗೈಡ್ ಕ್ಯಾಪ್ಟನ್ ಶ್ರೀಮತಿ ಕೆ.ವಿ. ವಸಂತಮ್ಮ, ಅತ್ತಿಬೆಲೆಯ ಸರ್ಕಾರಿ ಮಾದರಿ ಬಾಲಕರ ಪ್ರಾಥಮಿಕ ಶಾಲೆಯ ಗೈಡ್ ಕ್ಯಾಪ್ಟನ್ ಶ್ರೀಮತಿ ಎ.ಎನ್. ಪ್ರಭಾವತಿ ರವರು ಪ್ರಥಮ ಚಿಕಿತ್ಸೆ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದರು.

ಆನೇಕಲ್‌ನ ಸರಸ್ವತಿ ವಿದ್ಯಾಮಂದಿರ ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ಆರ್. ಮುನಿರಾಜು ಪಯನಿಯರಿಂಗ್ ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದರು. ಇದೇ ಶಾಲೆಯ ಗೈಡ್ ಕ್ಯಾಪ್ಟನ್ ಶ್ರೀಮತಿ ಜಿ. ದೀಪಿಕಾ ರವರು ಮ್ಯಾಪಿಂಗ್ ತರಬೇತಿ ಶಿಬಿರದಲ್ಲಿ ಭಾಗವಹಿಸಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿ ಬಂದಿರುತ್ತಾರೆ.

* ಅಕ್ಟೋಬರ್8 ರಂದು ವಿಜಯದಶಮಿ ಪ್ರಯುಕ್ತ ಆನೇಕಲ್‌ನ ಶ್ರೀ ಚೌಡೇಶ್ವರಿ ದೇವಿ ದೇವಾಲಯ ಸಮಿತಿಯವರು ಆನೇಕಲ್‌ನಲ್ಲಿ ಆನೆ ಸಹಿತ ಅಂಬಾರಿ ದಸರಾ ಮೆರವಣಿಗೆ ಹಾಗೂ ಅನ್ನ ದಾಸೋಹವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಹೆಬ್ಬಗೋಡಿಯ ಸರ್ಕಾರಿ ಪ್ರೌಢಶಾಲೆ, ಕಿತ್ತಗಾನಹಳ್ಳಿಯ ಬಿ.ಎಲ್. ಕಾರ್ಮೆಲ್ ಮರಸೂರಿನ ಸರ್ಕಾರಿ ಪ್ರೌಢಶಾಲೆ, ಸಂತ ಜೋಸೆಫರ ಶಾಲೆ ಹಾಗೂ ಭಗತ್ ಸಿಂಗ್ ಓಪನ್ ರೋವರ್ ತಂಡಗಳ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್‌ಗಳು ಭಾಗವಹಿಸಿದ ಸೇವೆ ಸಲ್ಲಿಸಿದರು.

* ಅಕ್ಟೋಬರ್ 2 ರಂದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ 150ನೇ ಜನ್ಮ ದಿನಾಚರಣೆ ಹಾಗೂ ಮಾಜಿ



ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರೀಜಿಯವರ ಜನ್ಮ ದಿನಾಚರಣೆ ಪ್ರಯುಕ್ತ ಹೆಬ್ಬಗೋಡಿಯು ನಗರಸಭೆ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಹೆಬ್ಬಗೋಡಿಯ ಸರ್ಕಾರಿ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್ ಭಾಗವಹಿಸಿದ್ದರು. ಕಿತ್ತಗಾನ ಹಳ್ಳಿಯ ಬಿ.ಎಸ್. ಕಾರ್ಮೆಲ್ ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ಆರ್. ಅರುಣ್ ನೇತೃತ್ವದಲ್ಲಿ ಈ ಶಾಲೆಯ ಸ್ಕೌಟ್ಸ್ ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಿ ನಂತರ ಗ್ರಾಮದ ಪ್ರಮುಖ ರಸ್ತೆಗಳಲ್ಲಿ ಪ್ಲಾಸ್ಟಿಕ್ ನಿಷೇಧದ ಕುರಿತಾದ ಬಿತ್ತಿ ಚಿತ್ರಗಳೊಂದಿಗೆ ಜನಜಾಗೃತಿ ಮೆರವಣಿಗೆ ನಡೆಸಿದರು.

* ಹೆಬ್ಬಗೋಡಿಯ ಜೆ.ಎಂ. ಪಬ್ಲಿಕ್ ಸ್ಕೂಲಿನ ಸ್ಕೌಟ್ ಮಾಸ್ಟರ್ ಶ್ರೀ ನಂಜುಂಡಯ್ಯರವರ ನೇತೃತ್ವದಲ್ಲಿ ಈ ಶಾಲೆಯ ಸ್ಕೌಟ್ಸ್ ವಿದ್ಯಾರ್ಥಿಗಳು ಮಹಾತ್ಮಾ ಗಾಂಧೀಜಿರವರವ ಜನ್ಮದಿನಾಚರಣೆಯನ್ನು ಆಚರಿಸಿದರು.

* ಬನ್ನೇರುಘಟ್ಟದ ಬ್ಲೂಮಿಂಗ್ ಫ್ಲವರ್ಸ್ ಶಾಲೆಯ ಸ್ಕೌಟ್ಸ್-ಗೈಡ್ಸ್ ಸರ್ವಧರ್ಮ ಪ್ರಾರ್ಥನೆ ಸಮಾರಂಭವನ್ನು ಏರ್ಪಡಿಸಿದ್ದರು.

* ಸರ್ಜಾಪುರದ ಸರ್ದಾರ್ ವಲ್ಲಭಭಾಯಿ ಪಟೇಲ್ ಪದವಿಪೂರ್ವ ಕಾಲೇಜಿನ ರೋವರ್ ಸ್ಕೌಟ್ ಲೀಡರ್ ಶ್ರೀ ಹೆಚ್.ಕೆ. ಶ್ರೀನಿವಾಸ್ ರವರ ನೇತೃತ್ವದಲ್ಲಿ ಶ್ರಮದಾನ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು.

* ನೆರಳೂರಿನ ಸ್ವಾಮಿ ವಿವೇಕಾನಂದ ವಿದ್ಯಾನಿಕೇತನ ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ಎನ್. ಪ್ರಭಾಕರ್‌ರವರ ನೇತೃತ್ವದಲ್ಲಿ ಇಲ್ಲಿನ ಸ್ಕೌಟ್ಸ್-ಗೈಡ್ಸ್‌ಗಳು ಗ್ರಾಮದ ಪ್ರಮುಖ ಬೀದಿಗಳಲ್ಲಿ ಶ್ರಮದಾನ ಮಾಡುವ ಮೂಲಕ ಪ್ಲಾಸ್ಟಿಕ್ ಹಾಗೂ ಇನ್ನಿತರೆ ತ್ಯಾಜ್ಯಗಳನ್ನು ತೆರೆವುಗೊಳಿಸಿದರು.

## ಬೆಂಗಳೂರು ಉತ್ತರ

**Bangalore North District Conducted the Nipun Testing Camp for Rovers and Rangers from 21st to 22nd September at Maharani's College for women, Palace Road, Bangalore**



The camp was inaugurated by Dr. Ram Gopal, Principal of Maharani's College. Sri B.K. Sheshadri, District Secretary, Sri Daniel Sukumardas Leader of Rover Camp Smt. Shubha, Leader of the Ranger Camp, Smt. Shanthakumari, Ranger Leader of Maharani's College and Smt. Kumari Honnamma, ASOC were present. Later the Principal Dr. Ramgopal addressed the Testing Camp participants and wished them good luck. Earlier Smt. P. Saroja, District Chief Commissioer also addressed the Campers.

* Scouts from Sri Chamundi Scout Group had been to Shivagange near Dabaspete on 29th September for a Day Hike. While returning to city scouts took initiative to remove plastics which were lying around the Hillock.



## ಚಿತ್ರದುರ್ಗ

ಪರಿಸರ ಸಂರಕ್ಷಣೆ ನಮ್ಮೆಲ್ಲ ಹೊಣೆ. ಪ್ರಕೃತಿ ಮಾತೆಯನ್ನು ಉಳಿಸುವುದು ಪ್ರತಿಯೊಬ್ಬರ ಆದ್ಯ ಕರ್ತವ್ಯವಾಗಬೇಕು ಎಂದು ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಸುನೀತ ಮಲ್ಲಿಕಾರ್ಜುನ್ ತಿಳಿಸಿದರು. ಚಿತ್ರದುರ್ಗ ಜಿಲ್ಲಾ ಹಾಗೂ ತಾಲ್ಲೂಕು ಸ್ಥಳೀಯ ಸಂಸ್ಥೆ ವತಿಯಿಂದ ನಡೆದ ಗಾಂಧೀ ಜಯಂತಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರಿ ಜಯಂತಿ ಅಂಗವಾಗಿ ಸ್ವಚ್ಛತಾ ಆಂದೋಲನಾ ಕಾರ್ಯಕ್ರಮದಲ್ಲಿ ಮಾತನಾಡಿದರು. ರೈಲ್ವೆ ನಿಲ್ದಾಣಾಧಿಕಾರಿ ಶ್ರೀ ಲಕ್ರ ಜಾರ್ಖಂಡ್ ಹಾಗೂ ಶ್ರೀ ಮಂಜುನಾಥ್ ಮಾತನಾಡಿ, ಸ್ವಚ್ಛತೆ ನಿರ್ಮಾಣ ಮಾಡುವಲ್ಲಿ ಸ್ಕೌಟ್ ಮತ್ತು ಗೈಡ್‌ನ ಸೇವೆ ಅನನ್ಯವಾಗಿದೆ. ಇಂತಹ ಸೇವೆ ಕೇವಲ ಒಂದೇ ದಿನಕ್ಕೆ ಸೀಮಿತವಾಗದೆ ಪ್ರತಿದಿನ ಸ್ವಚ್ಛತೆಯ ಕಾರ್ಯ ಕೈಗೊಳ್ಳುವುದು ಅತ್ಯಗತ್ಯವಾಗಿದೆ ಎಂದು ತಿಳಿಸಿದರು. ಚಿತ್ರದುರ್ಗ ಸ್ಥಳೀಯ ಸಂಸ್ಥೆಯ ಖಜಾಂಚಿ ಶ್ರೀ ಗಂಗಾಧರ್ ಮಾತನಾಡಿ, ಮಕ್ಕಳಲ್ಲಿ ದೇಶಪ್ರೇಮ, ಶಿಸ್ತು, ಸಂಯಮ, ಮೂಡಿಸಲು ಸ್ಕೌಟ್ಸ್-ಗೈಡ್ಸ್ ಕೆಲಸ ಕಾರ್ಯಗಳು ಪ್ರೇರಣೆಯಾಗಿವೆ ಎಂದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆ ಸಹ ಕಾರ್ಯದರ್ಶಿ ಡಾ|| ರಹಮತ್ ಉಲ್ಲಾ, ಚಿತ್ರದುರ್ಗ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಉದಯ ಶಂಕರ್, ಚಿತ್ರದುರ್ಗ ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಚಲ್ಮೇಶ್ ಉಪಸ್ಥಿತರಿದ್ದರು.



* ಅಕ್ಟೋಬರ್ 2 ರಂದು ಪೂಜ್ಯ ಮಹಾತ್ಮಾ ಗಾಂಧೀಜಿ ಅವರ ಭಾವಚಿತ್ರಕ್ಕೆ ಪೂಜೆ ಮಾಡುವುದರೊಂದಿಗೆ 150ನೇ ಜನ್ಮ ದಿನಾಚರಣೆ ಹಾಗೂ 115 ನೇ ಲಾಲ್‌ಬಹದ್ದೂರ್ ಶಾಸ್ತ್ರೀರವರ ಜನ್ಮ ದಿನಾಚರಣೆಯನ್ನು ಹಾಗೂ ಸರ್ವಧರ್ಮ ಪ್ರಾರ್ಥನೆಯನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಆಚರಿಸಲಾಯಿತು. ಇದರ ಅಂಗವಾಗಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಂದ ಪ್ರಭಾತ್ ಪೇರಿ ನಡೆಸಲಾಯಿತು.



ಈ ಸಂದರ್ಭದಲ್ಲಿ ಶ್ರೀ ಚಳ್ಳಕೆರೆ ಯರ್ರಿಸ್ವಾಮಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಇವರು ಮಕ್ಕಳನ್ನು ಉದ್ದೇಶಿಸಿ ಗಾಂಧೀಜಿಯವರ ತ್ಯಾಗಮಯ ಜೀವನದ ಬಗ್ಗೆ ತಿಳಿಸಿದರು.

ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್, ಜಿಲ್ಲಾ ಗೈಡ್ ಆಯುಕ್ತರು ಗಾಂಧೀಯವರ ಬಾಲ್ಯಜೀವನದ ಸತ್ಯ ಘಟನೆಗಳ ದೃಷ್ಟಾಂತಗಳನ್ನು ಹೇಳಿದರು.

ಕಾರ್ಯಕ್ರಮದಲ್ಲಿ ಡಾ॥ ರಹಮತ್ ಉಲ್ಲಾ, ಜಿಲ್ಲಾ ಸಹ ಕಾರ್ಯದರ್ಶಿ, ಜಿಲ್ಲಾ ಖಜಾಂಚಿ ಶ್ರೀ ಅನ್ವರ್ ಪಾಷ, ಹಾಗೂ ಕಛೇರಿ ಸಿಬ್ಬಂದಿ ಹಾಜರಿದ್ದರು.

## ಚಿಕ್ಕಮಗಳೂರು

ಸೆಪ್ಟೆಂಬರ್ 25 ರಿಂದ 27 ರ ವರೆಗೆ “ಪ್ರೇರಣಾ” ಶಿಬಿರ ಮತ್ತು ರೇಂಜರ್ಸ್ ಶತಮಾನೋತ್ಸವ ಕಾರ್ಯಕ್ರಮವನ್ನು ಸ್ಕೌಟ್ ಭವನ, ಜಿಲ್ಲಾ ಆಟದ ಮೈದಾನ, ಚಿಕ್ಕಮಗಳೂರು ಇಲ್ಲಿ ನಡೆಸಲಾಯಿತು.

ಸೆಪ್ಟೆಂಬರ್ 25ರಂದು ಉದ್ಘಾಟನೆ ನೆರವೇರಿಸಿದ ಜಿಲ್ಲಾ ಯುವ ಸಬಲೀಕರಣ ಉಪನಿರ್ದೇಶಕಿ ಶ್ರೀಮತಿ ಮಂಜುಳ ಹುಲ್ಲಹಳ್ಳಿ ಮಾತನಾಡಿ ನಿಮ್ಮ ಏಳಿಗೆಗೆ ನೀವೇ ಶಿಲ್ಪಿಗಳು, ಶಿಸ್ತು ಸಂಯಮಕ್ಕೆ ಹೆಸರಾಗಿರುವ ಈ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ಮೈಗೂಡಿಸಿಕೊಂಡು ಹೊಸ ನಾಡೊಂದನ್ನು ಕಟ್ಟಲು ಕಂಕಣಬದ್ಧರಾಗಬೇಕಾಗಿದೆ ಎಂದರು. ಜಿಲ್ಲಾ ಪಂಚಾಯಿತಿ ಉಪನಿರ್ವಾಹಣಾಧಿಕಾರಿ ಶ್ರೀ ರಾಜ್‌ಗೋಪಾಲ್ ಮಾತನಾಡಿ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಳ್ಳಲು ಕರೆಯಿತ್ತರು, ಸಮಾರಂಭದಲ್ಲಿ ಮಹಿಳಾ ಸಾಧಕಿಯಾದ ದಕ್ಷ ಅರಣ್ಯಾಧಿಕಾರಿ ಶ್ರೀಮತಿ ಶಿಲ್ಪ ಮತ್ತು ಉಪನ್ಯಾಸಕಿ, ಸಾಹಿತಿ, ಸ್ನಾತಕೋತ್ತರ ಪರೀಕ್ಷೆಯಲ್ಲಿ ಸ್ವರ್ಣ ಪದಕ ವಿಜೇತೆ ಶ್ರೀಮತಿ ನಾಗಶ್ರೀ ತ್ಯಾಗರಾಜ್‌ರವರನ್ನು ಸನ್ಮಾನಿಸಲಾಯಿತು.



ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ ಮಾತನಾಡಿ. ಸವಾಲನ್ನು ಎದುರಿಸಲು ತಯಾರಿರುವವರು ಮಾತ್ರ ಯಶಸ್ಸು ಕಾಣಲು ಸಾಧ್ಯ ಎಂದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎ.ಎನ್. ಮಹೇಶ್ ಸ್ವಾಗತಿಸಿ, ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ಡಿ.ಎಸ್. ಮಮತ ವಂದಿಸಿದರು. ಶಿಬಿರದ ನಾಯಕತ್ವವನ್ನು ಶ್ರೀಮತಿ ಸುಹಾನಾ ಸುಲ್ತಾನಾ ವಹಿಸಿದ್ದರು.

ಕಾರ್ಯಕ್ರಮದಲ್ಲಿ “ಪರಿಸರ ಸಂರಕ್ಷಣೆಯಲ್ಲಿ ಯುವಜನತೆಯ ಪಾತ್ರ” ಇದರ ಬಗ್ಗೆ ಪರಿಸರವಾದಿ ಶ್ರೀ ಡಿ.ವಿ. ಗಿರೀಶ್, “ಮಹಿಳಾ ಸುರಕ್ಷತೆ ಕಾನೂನುಗಳು” ಬಗ್ಗೆ ನ್ಯಾಯವಾದಿ ಶ್ರೀಮತಿ ಡಿ.ಎಸ್. ಮಮತ, “ಸಮಯದ ಸಮರ್ಥ ನಿರ್ವಹಣೆ.” ಬಗ್ಗೆ ಶ್ರೀ ಎಂ.ಎನ್. ಷಡಕ್ಷರಿ, “ಸ್ವಾವಲಂಬನೆ ಮತ್ತು ಸಂರಕ್ಷಣೆ” ಬಗ್ಗೆ ಪೋಲಿಸ್ ಅಧಿಕಾರಿ ಶ್ರೀಮತಿ ವೀಣಾ, “ಹದಿ ಹರೆಯರು ಎದುರಿಸುವ ದೈಹಿಕ ಮತ್ತು ಮಾನಸಿಕ ಸಮಸ್ಯೆಗಳು” ಬಗ್ಗೆ ಶ್ರೀಮತಿ ಮಮತಾ ಮಹೇಶ್ “ಆರೋಗ್ಯ ಮತ್ತು ನೈರ್ಮಲ್ಯ”ದ ಬಗ್ಗೆ ಡಾ. ಗೀತಾ ಮತ್ತು ಹೇಮಲತಾ, ಮಾಹಿತಿ ನೀಡಿದರು. ರಸಪ್ರಶ್ನೆ, ಗುಂಪು ಚರ್ಚೆ ಮತ್ತು ಭಿತ್ತಿ ಚಿತ್ರ ತಯಾರಿ ಮುಂತಾದ ಚಟುವಟಿಕೆಗಳನ್ನು ಮಾಡಲಾಯಿತು.

ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸ್ಥಾನಿಕ ಆಯುಕ್ತರು ಅಂತಿಮ ದಿನ ಶಿಬಿರದಲ್ಲಿದ್ದು ತಮ್ಮ ಸಲಹೆ ಸೂಚನೆ ನೀಡಿದರು. ಅವರು ಸಮಾರೋಪ ಸಮಾರಂಭದಲ್ಲಿ ಮಾತನಾಡಿ, ಯುವತಿಯರಿಗೆ ವಿವಿಧ ಜೀವನ ಕೌಶಲ್ಯಗಳ ಬಗ್ಗೆ ಮತ್ತು ನಾಗರೀಕ ಕರ್ತವ್ಯದ ಬಗ್ಗೆ ಅರಿವು ಮೂಡಿಸಿ ಉತ್ತಮ ಪ್ರಜೆಗಳ ರೂಪಣೆಯೇ ರೇಂಜರ್ಸ್ ಗುರಿ ಎಂದರು. ಶಿಬಿರದಲ್ಲಿ 70 ರೇಂಜರ್ಸ್‌ಗಳು ಭಾಗವಹಿಸದ್ದರು.

* ಅಕ್ಟೋಬರ್ 11 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಜಿಲ್ಲಾ ವಕೀಲರ ಸಂಘ, ವಾರ್ತಾ ಇಲಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ರಕ್ಷಣಾ ಇಲಾಖೆ ಇವರ ಸಂಯುಕ್ತಾಶ್ರಯದಲ್ಲಿ



ಅಂತರ್‌ರಾಷ್ಟ್ರೀಯ ಹೆಣ್ಣು ಮಕ್ಕಳ ದಿನಾಚರಣೆ ಅಂಗವಾಗಿ ಅರಿವು ಕಾರ್ಯಕ್ರಮವನ್ನು ಎಸ್.ಟಿ.ಜೆ. ಮಹಿಳಾ ಪದವಿ ಕಾಲೇಜು, ಚಿಕ್ಕಮಗಳೂರು ಇಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮವನ್ನು ದೀಪ ಬೆಳಗಿಸುವುದರ ಮೂಲಕ ಶ್ರೀಮತಿ ಅರುಣಕುಮಾರಿ, ಸಿವಿಲ್ ಜಡ್ಜ್, ಜೆ.ಎಂ.ಎಫ್.ಸಿ. ಚಿಕ್ಕಮಗಳೂರು ಇವರು ಉದ್ಘಾಟಿಸಿದರು.

ಕಾರ್ಯಕ್ರಮದಲ್ಲಿ ಮಹಿಳಾ ಮತ್ತು ಮಕ್ಕಳ ಸುರಕ್ಷತೆ ಮತ್ತು ಸಬಲೀಕರಣ ಕಾನೂನುಗಳ ಸೇವೆಗಳ ಕುರಿತು ಮಾಹಿತಿ ನೀಡಲಾಯಿತು. ಅಧ್ಯಕ್ಷತೆಯನ್ನು ಶ್ರೀಮತಿ ಭಾರತಿ, ಪ್ರಾಂಶುಪಾಲರು ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀಮತಿ ಪ್ರಮೀಳಾ ಸಿ.ಎ. ಸಿವಿಲ್ ಜಡ್ಜ್ ಜೆ.ಎಂ.ಎಫ್.ಸಿ. ಚಿಕ್ಕಮಗಳೂರು, ಶ್ರೀ ಎಂ.ಎಸ್. ಷಡಕ್ಷರಿ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎ.ಎನ್. ಮಹೇಶ್ ಜಿಲ್ಲಾ ಆಯುಕ್ತರು(ಸ್ಕೌ) ಶ್ರೀಮತಿ ಮಮತಾ, ಜಿಲ್ಲಾ ಆಯುಕ್ತರು(ಗೈ) ಜಿಲ್ಲಾ ಸಂಚಾಲಕರು ಶ್ರೀ ನವೀನ್ ಕುಮಾರ್, ಶ್ರೀ ಶಿವು, ಶ್ರೀಕರಿಸಿದ್ದಪ್ಪ, ಶ್ರೀಮತಿ ಮಮತಾ, ಕು॥ ಅಶ್ವಿನಿರವರು ಭಾಗವಹಿಸಿದ್ದರು.

* ಅಕ್ಟೋಬರ್ 2ರಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ 150ನೇ ಗಾಂಧೀಜಯಂತಿಯನ್ನು ಆಚರಿಸಲಾಯಿತು. ಕಾರ್ಯಕ್ರಮದಲ್ಲಿ ಗಾಂಧೀಜಿಯ ಬಗ್ಗೆ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಸ್. ಷಡಕ್ಷರಿ ಯವರು ತಿಳಿಸಿ ಪ್ಲಾಸ್ಟಿಕ್ ಮುಕ್ತ ವಾತಾವರಣಗೊಳಿಸಲು ಮಕ್ಕಳಿಗೆ ಪ್ರತಿಜ್ಞಾ ವಿಧಿಯನ್ನು ಬೋಧಿಸಿದರು. ನಂತರ ನಗರದ ಬೋಳೇಶ್ವರ ದೇವಸ್ಥಾನದ ಸುತ್ತಮುತ್ತ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು.

ಮುಖ್ಯ ಅತಿಥಿಯಾಗಿ ಕೆನರಾ ಬ್ಯಾಂಕ್‌ನ ಸಹಾಯಕ ಮಹಾಪ್ರಬಂಧಕರಾದ ಶ್ರೀ ಉಲ್ಲಾಸ್ ಕುಮಾರ್ ರವರು ಆಗಮಿಸಿದ್ದರು. ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಅಕ್ಟೋಬರ್ 2ರಂದು ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಸಂಸ್ಥೆ ಹಾಗೂ ಎಸ್.ಟಿ.ಜೆ. ಪ್ರಥಮ ದರ್ಜೆ ಕಾಲೇಜು, ರೇಂಜರ್ಸ್ ಘಟಕ ಇವರ ಸಹಯೋಗದೊಂದಿಗೆ ಅನ್ನಪೂರ್ಣ ವೃದ್ಧಾಶ್ರಮಕ್ಕೆ ಭೇಟಿ ನೀಡಿ 150ನೇ ಗಾಂಧೀಜಯಂತಿಯನ್ನು ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀಮತಿ ಭಾರತಿ, ಪ್ರಾಂಶುಪಾಲರು ವಹಿಸಿದ್ದರು. ವೃದ್ಧಾಶ್ರಮದಲ್ಲಿ ಹಣ್ಣು-ಹಂಪಲುಗಳನ್ನು ನೀಡಲಾಯಿತು, ಜಿಲ್ಲಾ ಸಂಸ್ಥೆಯ ವತಿಯಿಂದ ಶ್ರೀ ನವೀನ್ ಕುಮಾರ್ ಭಾಗವಹಿಸಿದ್ದರು.

## ದಾವಣಗೆರೆ

ಸೆಪ್ಟೆಂಬರ್ 21ರಂದು ಜಿಲ್ಲೆ ಸ್ಥಳೀಯ ಸಂಸ್ಥೆ ಹೊನ್ನಾಳಿ ಹಾಗೂ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹೊನ್ನಾಳಿ ಇವರ ಸಂಯುಕ್ತ ಆಶ್ರಯದಲ್ಲಿ ಮಹಾತ್ಮಾ ಗಾಂಧೀಜಿಯವರ 150ನೇ ಜನ್ಮ ದಿನಾಚರಣೆ ಪ್ರಯುಕ್ತ ರಾಷ್ಟ್ರೀಯ ಸ್ವಚ್ಛತಾ ದಿನಾಚರಣೆ ಮತ್ತು ಅಂತರಾಷ್ಟ್ರೀಯ ಶಾಂತಿ ದಿನಾಚರಣೆ ಕಾರ್ಯಕ್ರಮವನ್ನು ಕಾಲೇಜಿನ ಸಭಾಂಗಣದಲ್ಲಿ ಆಯೋಜನೆ ಮಾಡಲಾಗಿತ್ತು. ಒಟ್ಟು 80 ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

ಪ್ರಾಸ್ತಾವಿಕ ನುಡಿಯಲ್ಲಿ ಶ್ರೀ ಗಣೇಶ್‌ರವರು ಕಾರ್ಯಕ್ರಮದ ಆಯೋಜನೆಗೆ ಸ.ಪ್ರ.ದ. ಕಾಲೇಜು, ಹೊನ್ನಾಳಿ ನೀಡಿದ ಸಹಕಾರದ ಬಗ್ಗೆ ಹಾಗೂ ಈ ದಿನ ಆಯೋಜನೆ ಮಾಡಿರುವ ಕಾರ್ಯಕ್ರಮದ ಬಗ್ಗೆ ಪ್ರಶಂಸಿಸಿ, ಸ್ಕೌಟ್ಸ್-ಗೈಡ್ಸ್‌ನಿಂದ ವಿದ್ಯಾರ್ಥಿ ಜೀವನದಲ್ಲಿ ಸೇವಾ ಮನೋಭಾವನೆ, ಶೌರ್ಯ, ಧೈರ್ಯ ಹಾಗೂ ಸಾಹಸದಂತಹ ಗುಣಗಳನ್ನು ಬೆಳೆಸುತ್ತದೆ ಎಂದರು. ನಂತರ ಸರ್ವಧರ್ಮ ಪ್ರಾರ್ಥನೆ ಮಾಡಲಾಯಿತು.







ವಿಶೇಷ ಅತಿಥಿಗಳಾಗಿ ಆಗಮಿಸಿದ ಶ್ರೀಮತಿ ಪ್ರಭಾವತಿ, ಗೈಡ್ ಕ್ಯಾಪ್ಟನ್ ಈ ಸಂಸ್ಥೆಯಲ್ಲಿ ನಾನು ಒಬ್ಬ ಸದಸ್ಯೆ ಎಂದು ಹೇಳಲು ನನಗೆ ಹೆಮ್ಮೆ ಅನಿಸುತ್ತದೆ. ಇದರಿಂದ ನನಗೆ ಆರೋಗ್ಯ, ಕ್ರಿಯಾಶೀಲತೆ, ಸಮಾಜದಲ್ಲಿ ಹೇಗೆ ಬದುಕಬೇಕೆಂಬುದೆನ್ನುವ ವ್ಯಕ್ತಿತ್ವ ವಿಕಸನ ಬೆಳವಣಿಗೆಗೆ ಸಹಾಯಕವಾಗಿದೆ. ನನ್ನೆಲ್ಲಾ ಸಾಧನೆಗಳಿಗೆ ಸ್ಫೂರ್ತಿಯೇ ಈ ಸ್ಕೌಟ್–ಗೈಡ್ ಮಾರ್ಗದರ್ಶನವಾಗಿದೆ ಎಂದರು.

ಕು॥ ಸೌಮ್ಯ ಸಿ. ದೇವಾಂಗದ, ಕು॥ ಪ್ರವೀಣ್ ಎಸ್.ಸಿ. ಕು॥ ಅನಿತಾ ಹೆಚ್, ಕು॥ ಅರ್ಚನಾ ಹೆಚ್ ಈ ಕಾರ್ಯಕ್ರಮದ ಬಗ್ಗೆ ಅನಿಸಿಕೆ ವ್ಯಕ್ತಪಡಿಸಿದರು. ಅರ್ಥಶಾಸ್ತ ವಿಭಾಗದ ಮುಖ್ಯಸ್ಥ ಶ್ರೀ ಬೆಳ್ಳುಳ್ಳಿ ಕೊಟ್ರೇಶ್ ಹಾಗೂ ವಾಣಿಜ್ಯ ಶಾಸ್ತ್ರ ವಿಭಾಗದ ಮುಖ್ಯಸ್ಥ ಶ್ರೀ ಪಾರ್ಥಸಾರಥಿ ಎ.ಎಲ್., ಅವರುಗಳು ಮಾತನಾಡಿ ಜೀವನದಲ್ಲಿ ಕಲಿಯುವುದಕ್ಕೆ ಕೊನೆ ಎಂಬುದಿಲ್ಲ ಕಲ್ಲು ಶಿಲೆಯಾಗುವುದು ತಾಳ್ಮೆಯಿಂದ ಮಾತ್ರ. ಸ್ಕೌಟ್ಸ್–ಗೈಡ್ಸ್‌ನಿಂದ ತಾಳ್ಮೆ, ಶಿಸ್ತು, ಸಮಯಪಾಲನೆ ಕಲಿಕೆಗೆ ಅವಕಾಶವಾಗುವುದರಿಂದ ಸಮಾಜದ ಅಭಿವೃದ್ಧಿಗೆ ಸಹಾಯಕವಾಗಿದೆ ಎಂದರು.

ಶ್ರೀ ಶಿವಬಸಪ್ಪ ಹೆಚ್. ಎತ್ತಿನಹಳ್ಳಿ, ಪ್ರಾಂಶುಪಾಲರು ಸ.ಪ್ರ.ದ. ಕಾಲೇಜು ಹೊನ್ನಾಳಿ, ಇವರು ತಮ್ಮ ಅಧ್ಯಕ್ಷೀಯ ನುಡಿಯಲ್ಲಿ ಅತೀವ ಸಂತಸವನ್ನು ವ್ಯಕ್ತಪಡಿಸಿ ಈ ಕಾರ್ಯಕ್ರಮದ ಕೇಂದ್ರಬಿಂದುವೇ ಶಾಂತಿ, ನಾನೆಲ್ಲೋ ದೇವಸ್ಥಾನದಲ್ಲಿ ಇರುವಂತಹ ಅನುಭವವಾಗುತ್ತಿದೆ ಕಾಲೇಜಿನ ರೋವರ್ಸ್–ರೇಂಜರ್ಸ್‌ನ ನಾಯಕರುಗಳಿಗೆ ಅಭಿನಂದನೆ ಎಂದರು.

ಶ್ರೀಮತಿ ಅಮೂಲ್ಯ, ರೇಂಜರ್ ನಾಯಕಿ ಸ್ವಾಗತ ಕೋರಿದರು. ಶ್ರೀ ಪ್ರವೀಣ್ ವಂದನಾರ್ಪಣೆಗೈದರು.

ಉಪಹಾರದ ನಂತರ ಉಪನ್ಯಾಸಕರು ಶಿಕ್ಷಕರು ಮಕ್ಕಳು ಎಲ್ಲರೂ ಸೇರಿ ಕಾಲೇಜಿನ ಒಳಗಿನ ಹಾಗೂ ಹೊರಗಿನ ಆವರಣವನ್ನು ಸ್ವಚ್ಛಗೊಳಿಸಲಾಯಿತು.

## ದಕ್ಷಿಣ ಕನ್ನಡ

ಸೆಪ್ಟೆಂಬರ್ 13 ರಿಂದ 14 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ 2019–20ನೇ ಸಾಲಿನ ರಾಜ್ಯಮಟ್ಟದ ಚತುರ್ಥಚರಣ್ ಪರೀಕ್ಷಾ ಶಿಬಿರ ನಡೆಯಿತು. ಶಿಬಿರದಲ್ಲಿ ಒಟ್ಟು 188 ಕಬ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀಮತಿ ಭಾರತಿ ನಾಯಕ್, ಎ.ಎಲ್.ಟಿ.(ಕ) ಕಾರ್ಯ ನಿರ್ವಹಿಸಿದರು. ಜಿಲ್ಲಾ ಸಂಘಟಕ ಶ್ರೀ ಕೆ. ಭರತ್‌ರಾಜ್ ಪರೀಕ್ಷಾ ಶಿಬಿರವನ್ನು ಸಂಘಟಿಸಿದರು.

* ಸೆಪ್ಟೆಂಬರ್ 14 ರಿಂದ 15 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳದಲ್ಲಿ 2019–20ನೇ ಸಾಲಿನ ರಾಜ್ಯಮಟ್ಟದ ಹೀರಕ್‌ಗರಿ ಪರೀಕ್ಷಾ ಶಿಬಿರ ನಡೆಯಿತು. ಶಿಬಿರದಲ್ಲಿ ಒಟ್ಟು 190 ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕಿಯಾಗಿ ಶ್ರೀಮತಿ ಸಂಧ್ಯಾ ಶೆಣೈ, ಎ.ಎಲ್.ಟಿ.(ಫ್ಲಾ) ಕಾರ್ಯ ನಿರ್ವಹಿಸಿದರು.

* ಸೆಪ್ಟೆಂಬರ್ 21 ರಿಂದ 23 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರಿನಲ್ಲಿ 2019–20ನೇ ಸಾಲಿನ ಜಿಲ್ಲಾ ಮಟ್ಟದ ರೋವರ್ಸ್–ರೇಂಜರ್ಸ್ ನಿಪುಣ್ ಪರೀಕ್ಷಾ ಶಿಬಿರ ನಡೆಯಿತು. ಶಿಬಿರದಲ್ಲಿ ಒಟ್ಟು 54 ರೋವರ್ಸ್, 66 ರೇಂಜರ್ಸ್ ಭಾಗವಹಿಸಿದ್ದರು. ರೋವರ್ ವಿಭಾಗದ ನಾಯಕರಾಗಿ ಡಾ. ರವಿ (ಆರ್.ಎಸ್.ಎಲ್) ರೇಂಜರ್ ವಿಭಾಗದ ನಾಯಕಿಯಾಗಿ ಕು॥ ದೀಪಿಕಾ (ಆರ್.ಎಲ್.) ಕಾರ್ಯ ನಿರ್ವಹಿಸಿದರು.





* ಸೆಪ್ಟೆಂಬರ್ 21ರಂದು ವಿಶ್ವಶಾಂತಿ ದಿನಾಚರಣೆ ಪ್ರಯುಕ್ತ ಶ್ರೀ ನಾರಾಯಣ ಗುರು ಪದವಿ ಪೂರ್ವ ಕಾಲೇಜು, ಕಾಟಿಪಳ್ಳ ಇಲ್ಲಿಯ 50 ರೋವರ್ಸ್-ರೇಂಜರ್ಸ್ ಸೇರಿ ಸುರತ್ಕಲ್ ಕಡಲಕಿನಾರೆಯಲ್ಲಿ ಬೃಹತ್ ಸ್ವಚ್ಛತಾ ಕಾರ್ಯಕ್ರಮವನ್ನು ಕೈಗೊಂಡರು. ಕಾರ್ಯಕ್ರಮದಲ್ಲಿ ಶ್ರೀ ನಾರಾಯಣ ಗುರು ಪದವಿ ಪೂರ್ವ ಕಾಲೇಜಿನ ಅಧ್ಯಕ್ಷರು, ಶ್ರೀ ಸಾಧು ಪೂಜಾರಿ, ಸಂಚಾಲಕರು ಶ್ರೀ ಪಿ. ಅರುಣ್ ಪ್ರಾಂಶುಪಾಲರು ಶ್ರೀ ಎಂ. ಉಮೇಶ್, ಕರ್ಕೆರಾ ರೋವರ್ ಸ್ಕೌಟ್ ಲೀಡರ್ ಶ್ರೀ ಮಂಜುನಾಥ್, ರೇಂಜರ್ ಲೀರ್ ಶ್ರೀಮತಿ ನಬೈಸಾ, ಉಪನ್ಯಾಸಕರು ಶ್ರೀ ಧರ್ಮಪಾಲರವರು ಉಪಸ್ಥಿತರಿದ್ದರು.

* ಸೆಪ್ಟೆಂಬರ್ 21 ರಂದು ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ತರಬೇತಿ ಕೇಂದ್ರ, ಪಿಲಿಕುಳ ಮಂಗಳೂರಿನಲ್ಲಿ "ವಿಶ್ವಶಾಂತಿ ದಿನಾಚರಣೆ" ಆಚರಿಸಲಾಯಿತು. ಕಾರ್ಯಕ್ರಮದಲ್ಲಿ 120 ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿ ತರಬೇತಿ ಕೇಂದ್ರದ ಸುತ್ತಮುತ್ತ ಸ್ವಚ್ಛತಾ ಕಾರ್ಯ ಕೈಗೊಂಡರು. ರಾತ್ರಿ ಮೇಣದ ಬತ್ತಿಯನ್ನು ಹಚ್ಚಿ ವಿಭಿನ್ನ ರೀತಿಯಲ್ಲಿ ಶಾಂತಿ ದಿನಾಚರಣೆ ಆಚರಿಸಲಾಯಿತು. ದಿನದ ಮಹತ್ವದ ಬಗ್ಗೆ ರೋವರ್ ಸ್ಕೌಟ್ ಲೀಡರ್ ಡಾ. ರವಿಯವರು ಮಾಹಿತಿ ನೀಡಿದರು.



* ಸೆಪ್ಟೆಂಬರ್ 18 ರಂದು ಜಿಲ್ಲಾ ಮಟ್ಟದ ದೇಶಭಕ್ತಿ ಗೀತಗಾಯನ ಸ್ಪರ್ಧೆ ಮಂಗಳೂರಿನ ಸ್ಕೌಟ್ ಭವನದಲ್ಲಿ ನಡೆಯಿತು. ಪ್ರಾರ್ಥನೆಯ ಬಳಿಕ ಜಿಲ್ಲಾ ಕಾರ್ಯದರ್ಶಿ (ಪ್ರ) ಶ್ರೀ ಎಂ.ಜಿ. ಕಜೆ ಎಲ್ಲರನ್ನು ಸ್ವಾಗತಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಎನ್.ಜಿ. ಮೋಹನ್, ಜಿಲ್ಲಾ ಆಯುಕ್ತರು(ಸ್ಕೌ) ಶ್ರೀ ರಾಮಶೇಷ ಶೆಟ್ಟಿ ಉಪಸ್ಥಿತರಿದ್ದರು. ತೀರ್ಪುಗಾರರಾದ ಸಂಗೀತ ವಿದ್ವಾನ್ ಶ್ರೀ ರಾಘವೇಂದ್ರ



ರಾವ್, ಶ್ರೀಮತಿ ಪ್ರಿಯ ಹರೀಶ್ ಶೆಟ್ಟಿ ಮತ್ತು ಸಂಧ್ಯಾರಾಣಿ ದೀಪ ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ವಿವಿಧ ಶಾಲೆಗಳಿಂದ 9 ಕಬ್ಸ್, 12 ಬುಲ್‌ಬುಲ್ಸ್‌ಗಳು, ಸ್ಕೌಟ್ ವಿಭಾಗದಲ್ಲಿ 9 ತಂಡ ಮತ್ತು ಗೈಡ್ ವಿಭಾಗದಲ್ಲಿ 10 ತಂಡಗಳು ಸ್ಪರ್ಧೆಯಲ್ಲಿ ಭಾಗವಹಿಸಿದ್ದರು.

ಅಪರಾಹ್ನ ನಡೆದ ಸಮಾರೋಪ ಸಮಾರಂಭದಲ್ಲಿ ದ.ಕ. ಜಿಲ್ಲೆ ಮಂಗಳೂರಿನ ಜಿಲ್ಲಾ ರೆಡ್‌ಕ್ರಾಸ್ ಸೊಸೈಟಿಯ ಕಾರ್ಯದರ್ಶಿ ಶ್ರೀ ಎಸ್.ಎ. ಪ್ರಭಾಕರ್ ಶರ್ಮರವರು ವಿಜೇತರಿಗೆ ಪ್ರಮಾಣ ಪತ್ರ ಹಾಗೂ ಬಹುಮಾನ ವಿತರಿಸಿದರು. ಸಭಾಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಎನ್. ಜಿ. ಮೋಹನ್ ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಜಿ. ಕಜೆ, ಕಛೇರಿಯ ವ್ಯವಸ್ಥಾಪಕರು ಶ್ರೀ ಭಾಸ್ಕರ್ ಹಾಗೂ ತೀರ್ಪುಗಾರರು ಉಪಸ್ಥಿತರಿದ್ದರು. ಜಿಲ್ಲಾ ಸಂಘಟಕ ಶ್ರೀ ಭರತ್ ರಾಜ್ ಕಾರ್ಯಕ್ರಮ ನಿರ್ವಹಿಸಿದರು.

* ಸೆಪ್ಟೆಂಬರ್ 28 ರಿಂದ 30ರ ವರೆಗೆ ವಿವೇಕಾನಂದ ಕಾಲೇಜ್, ಪುತ್ತೂರಿನಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ, ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ, ವಿವೇಕಾನಂದ ಕಾಲೇಜು ಪುತ್ತೂರು ಇವರ ಸಹಭಾಗಿತ್ವದಲ್ಲಿ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್ "ವಿಪತ್ತು ನಿರ್ವಹಣಾ ತರಬೇತಿ ಶಿಬಿರ" ನಡೆಯಿತು ಕಾರ್ಯಕ್ರಮವನ್ನು ಜಿಲ್ಲಾ ಮುಖ್ಯ ಆಯುಕ್ತ ಡಾ. ಎನ್.ಜಿ. ಮೋಹನ್ ರವರು ಉದ್ಘಾಟಿಸಿ ಮಾತನಾಡಿದರು. ಅಧ್ಯಕ್ಷತೆಯನ್ನು ಶ್ರೀ ಬಿ. ಶ್ರೀನಿವಾಸ್ ಪೈ ಅಧ್ಯಕ್ಷರು, ಆಡಳಿತ ಮಂಡಳಿ ವಿವೇಕಾನಂದ ಕಾಲೇಜು, ಪುತ್ತೂರುರವರು ವಹಿಸಿದ್ದರು. ಅತಿಥಿಗಳಾಗಿ ಶ್ರೀ ರಾಮಶೇಷ ಶೆಟ್ಟಿ ಜಿಲ್ಲಾ ಸ್ಕೌಟ್ ಆಯುಕ್ತರು ಶ್ರೀ ಎಂ.ಜಿ. ಕಜೆ ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ಜಯವಂತಿ ಸೋನ್ಸ್, ಜಿಲ್ಲಾ ಜಂಟಿ ಕಾರ್ಯದರ್ಶಿ, (ಗೈ), ಡಾ. ಪೀಟರ್ ವಿಲ್ಸನ್ ಪ್ರಭಾಕರ್ ಪ್ರಾಂಶುಪಾಲರು ವಿವೇಕಾನಂದ ಕಾಲೇಜು, ಪುತ್ತೂರು, ಶ್ರೀಧರ್ ಸಂಯೋಜಕರು ಡಿಕ್ಯೂವಿಸಿ, ವಿವೇಕಾನಂದ ಕಾಲೇಜು.

ಪುತ್ತೂರು, ಶ್ರೀ ಈಶ್ವರ ಪ್ರಸಾದ್ (ಆರ್.ಎಸ್.ಎಲ್.) ಶಿಬಿರ ನಾಯಕರು ಉಪಸ್ಥಿತರಿದ್ದರು. ಶಿಬಿರದಲ್ಲಿ ಜಿಲ್ಲೆಯ 33 ಕಾಲೇಜನಿಂದ 151 ರೋವರ್ಸ್, 147 ರೇಂಜರ್ಸ್, ಒಟ್ಟು 298 ವಿದ್ಯಾರ್ಥಿಗಳು ಹಾಗೂ 16 ರೋವರ್ ಸ್ಕೌಟ್ ಲೀಡರ್ಸ್, ರೇಂಜರ್ ಲೀಡರ್ ಭಾಗವಹಿಸಿದ್ದರು.

* ಸೆಪ್ಟೆಂಬರ್ 30 ರಿಂದ ಅಕ್ಟೋಬರ್ 9ರ ವರೆಗೆ ಕುದ್ರೋಳಿ ಶ್ರೀ ಗೋಕರ್ಣನಾಥ ಕ್ಷೇತ್ರ, ಮಂಗಳೂರಿನಲ್ಲಿ ನಡೆದ ಮಂಗಳೂರು ದಸರಾ ಕಾರ್ಯಕ್ರಮದಲ್ಲಿ ಜಿಲ್ಲೆಯ ಸರಕಾರಿ ಪ್ರೌಢಶಾಲೆ ಬೊಕ್ಕಪಟ್ನ ಮಂಗಳೂರಿನ 12 ಗೈಡ್ಸ್, ಸರಕಾರಿ ಪ್ರಥಮ ದರ್ಜೆ ಕಾಲೇಜ್, ಬಲ್ಮಠದ 10 ರೇಂಜರ್ಸ್, ಸರಕಾರಿ ಪ್ರಥಮ ದರ್ಜೆ ಕಾಲೇಜ್ ಕಾವೂರು ನಿಂದ 7 ರೇಂಜರ್ಸ್, ಸರಕಾರಿ ಪ್ರಥಮ ದರ್ಜೆ ಕಾಲೇಜು, ಕಾರ್ ಸ್ಟ್ರೀಟ್‌ನಿಂದ 17 ರೇಂಜರ್ಸ್, ಕೆನರಾ ಕಾಲೇಜ್ ಮಂಗಳೂರಿನಿಂದ 5 ರೇಂಜರ್ಸ್, 1 ರೋವರ್, ಎಸ್.ಎಮ್. ಕುಶೆ ಪದವಿ ಪೂರ್ವ ಕಾಲೇಜ್, ಅತ್ತಾವರ ಮಂಗಳೂರಿನಿಂದ 4 ರೋವರ್ಸ್, ಸರಕಾರಿ ಪ್ರಥಮದ ದರ್ಜೆ ಕಾಲೇಜ್ ಬೆಟ್ಟಂಪಾಡಿಯಿಂದ 5 ರೋವರ್ಸ್, 15 ರೇಂಜರ್ಸ್, ಸರಕಾರಿ ಪ್ರಥಮ ದರ್ಜೆ ಕಾಐಜು ಪೂಂಜಾಲ ಕಟ್ಟೆಯಿಂದ 17 ರೋವರ್ಸ್, ಸಂತ ಫಿಲೋಮಿನಾ ರೋವರ್, ವಿವೇಕಾನಂದ ಕಾಲೇಜ್ ಪುತ್ತೂರಿನಿಂದ 3 ರೋವರ್ಸ್, ಸೇಕ್ರೆಡ್ ಹಾರ್ಟ್ ಕಾಲೇಜ್ ಮಡಂತ್ಯಾರ್‌ನಿಂದ 1 ರೋವರ್, ವಿವೇಕಾನಂದ ಕಾಲೇಜ್ ಪುತ್ತೂರಿನಿಂದ 34 ರೋವರ್ಸ್, 30 ರೇಂಜರ್ಸ್, ಕೆ.ಎಸ್.ಎಸ್. ಕಾಲೇಜ್ ಸುಬ್ರಹ್ಮಣ್ಯದಿಂದ 24 ರೋವರ್ಸ್ ಒಟ್ಟು 185 ಸ್ಕೌಟ್ಸ್–ಗೈಡ್ಸ್, ರೋವರ್ಸ್–ರೇಂಜರ್ಸ್, ಕೆ.ಎಸ್.ಎಸ್. ವಿದ್ಯಾರ್ಥಿಗಳು ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದರು. ಶಿಬಿರ ನಾಯಕತ್ವವನ್ನು ಶ್ರೀಮತಿ ಜಯಶ್ರೀ ಜಿಲ್ಲಾ ತರಬೇತಿ ಆಯುಕ್ತರು (ಗೈ), ಶ್ರೀ ಭರತ್ ರಾಜ್ ಕೆ. ಜಿಲ್ಲಾ ಸಂಘಟಕ, ಶ್ರೀ ಮನೋಹರ್ ರೋವರ್ ಸ್ಕೌಟ್ ಲೀಡರ್, ಶ್ರೀ ಪುನೀತ್ ರೋವರ್ ಸ್ಕೌಟ್ ಲೀಡರ್, ಶ್ರೀ ಪ್ರಿತೇಶ್ ರೋವರ್ ಸ್ಕೌಟ್ ಲೀಡರ್, ಕು. ದೀಪಿಕಾ ರೇಂಜರ್ ಲೀಡರ್, ಶ್ರೀಮತಿ ಮಮತಾ, ಶ್ರೀಮತಿ ಧನ್ಯರವರು ವಹಿಸಿಕೊಂಡಿದ್ದರು.

## ಧಾರವಾಡ

ಸೆಪ್ಟೆಂಬರ್ 30ರಂದು ಜಿಲ್ಲಾ ಸಂಸ್ಥೆಯ ಶತಮಾನೋತ್ಸವ ಕಾರ್ಯಕ್ರಮ ನಡೆಯಿತು. ಉದ್ಘಾಟಕರಾಗಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಆಗಮಿಸಿದ್ದರು. ಮುಖ್ಯ ಅತಿಥಿಗಳಾಗಿ ವಿಧಾನ ಪರಿಷತ್ ಸದಸ್ಯರಾದ ಶ್ರೀ ಬಸವರಾಜ ಹೊರಟ್ಟಿಯವರು ಆಗಮಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ರಜನಿದಾಸ ಇವರು ವಹಿಸಿದ್ದರು, ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರು ಹಾಗೂ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಗಜಾನನ ಮನ್ನಿಕೇರಿ ಮತ್ತು ನವಲಗುಂದ ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಗಿರೀಶ ಪದಕಿ ಇವರು ಸಹ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವ್ಹಿ.ವ್ಹಿ. ಕಟ್ಟಿ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ವಿದ್ಯಾ ನಾಡಗೀರ, ಜಿಲ್ಲಾ ಕೋಶಾಧಿಕಾರಿಗಳಾದ ಶ್ರೀ ಎಸ್.ಐ. ನೇಕಾರ, ಜಿಲ್ಲಾ ಕಾರ್ಯದರ್ಶಿಯಾದ ಶ್ರೀಮತಿ ಪ್ರಭಾ ಲೋಂಡೆ, ಜಿಲ್ಲಾ ಸಹಕಾರ್ಯದರ್ಶಿಯಾದ ಶ್ರೀ ಎ.ವಿ. ಶಿಂಧೆ, ಸ್ಥಾನಿಕ ಆಯುಕ್ತರಾದ ಶ್ರೀ ಎಸ್.ವಿ. ಮೊರಬ, ಸಹಾಯಕ ಜಿಲ್ಲಾ ಆಯುಕ್ತಾದ ಶ್ರೀ ಪ್ರಭಾಕರ ಬಿಲ್ಲೆ ಹಾಗೂ ವಿವಿಧ ತಾಲೂಕಿನಿಂದ ಹಿರಿಯ ಸ್ಕೌಟರ್ಸ್–ಗೈಡರ್ಸ್, ಕಬ್ ಮಾಸ್ಟರ್–ಫ್ಲಾಕ್ ಲೀಡರ್ಸ್, ಸ್ಕೌಟ್ ಮಾಸ್ಟರ್ಸ್–ಗೈಡ್ ಕ್ಯಾಪ್ಟನ್ ಭಾಗವಹಿಸಿದ್ದರು. ಸ್ಥಳೀಯ ಸ್ಕೌಟ್ಸ್–ಗೈಡ್ಸ್‌ಗಳಿಂದ 101 ಜ್ಯೋತಿ ಬೆಳಗಿಸಲಾಯಿತು.



ಪ್ರಾಸ್ತಾವಿಕ ಹಾಗೂ ಜಿಲ್ಲಾ ಸಂಸ್ಥೆಯು ಬೆಳೆದು ಬಂದಿರುವುದರ ಬಗೆಗೆ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ ವಿವರಿಸದರು.

ಸಸಿಗೆ ನೀರು ಹಾಕುವುದರ ಮೂಲಕ ಗಣ್ಯ ಮಾನ್ಯರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ರಾಜ್ಯ ಮುಖ್ಯ



ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಸ್ವಾವಲಂಬಿಯಾಗಿ ಬೆಳೆದು ನಿಲ್ಲಬೇಕು. ಸರಕಾರವನ್ನು ನೆಚ್ಚಿಕೊಂಡು ಇರಬಾರದು. ಇದಕ್ಕೆ ಬೇಕಾದ ಸಂಪನ್ಮೂಲಗಳನ್ನು ಬೆಳೆಸಿಕೊಳ್ಳಬೇಕೆಂದು ಹಾಗೂ ರಾಜ್ಯ ಸಂಸ್ಥೆಯಿಂದ ಸಹಾಯ ಮಾಡಲಾಗುವದು ಎಂದು ತಿಳಿಸಿದರು. ಸ್ಕೌಟ್ಸ್-ಗೈಡ್ಸ್‌ನಲ್ಲಿರುವ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು ಎಂದು ತಿಳಿಸಿದರು.

ಶ್ರೀ ಬಸವರಾಜ ಹೊರಟ್ಟಿಯವರು ಮಾತನಾಡಿ ಸ್ಕೌಟ್ಸ್-ಗೈಡ್ಸ್‌ನಲ್ಲಿ ಸಾಮಾಜಿಕ ಜೀವನಕ್ಕೆ ಉಪಯುಕ್ತವಾದ ತತ್ವಗಳು ಸಾಕಷ್ಟಿವೆ. ಅವುಗಳನ್ನು ನಾವೆಲ್ಲರೂ ಅಳವಡಿಸಿಕೊಂಡರೆ ಒಳ್ಳೆಯ ಸಮಾಜದ ನಿರ್ಮಾಣವಾಗುತ್ತದೆ ಹಾಗೂ ಸ್ವಾವಲಂಬಿಯಾಗಿ ಬೆಳೆದು ನಿಲ್ಲಲು ಸಂಸ್ಥೆಯ ನಿಯಮ ಮತ್ತು ತತ್ವಗಳು ಸಹಾಯ ಮಾಡುತ್ತವೆ ಎಂದು ಹೇಳಿದರು. ಸಂಸ್ಥೆಯ ಬೆಳವಣಿಗೆಯಲ್ಲಿ ನನ್ನ ಕೈಲಾದ ಮಟ್ಟಿಗೆ ಸಹಾಯ ಮಾಡುತ್ತೇನೆಂದು ತಮ್ಮ ಮಾತಿನಲ್ಲಿ ಹೇಳಿದರು. ಬಾಲ್ಯದಲ್ಲಿ ನಾನು ಸ್ಕೌಟ್ ಆಗಿದ್ದೆ ಎಂದು ಮೆಲಕು ಹಾಕಿದರು. ಗೈಡ್ ಕ್ಯಾಪ್ಟನ್ನರಾದ ಶ್ರೀಮತಿ ಎಂ.ಎ. ಯಕ್ಕುಂಡಿ ಸ್ವಾಗತ ಮಾಡಿದರು. ವಂದನಾರ್ಪಣೆಯನ್ನು ಸ್ಕೌಟ್ ಮಾಸ್ಟರಾದ ಶ್ರೀ ಎನ್.ವಿ. ಕುರವತ್ತಿಮಠ ಮಾಡಿದರು.

## ಗದಗ

ಸೆಪ್ಟೆಂಬರ್ 23 ರಂದು ಪುರಾತತ್ವ ಇಲಾಖೆ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಸಹಯೋಗದೊಂದಿಗೆ ಲಕ್ಕುಂಡಿಯಲ್ಲಿ ಸ್ವಚ್ಛತಾ ಅಭಿಯಾನವನ್ನು ಹಾಗೂ ಜನರಲ್ಲಿ ಅರಿವು ಮೂಡಿಸುವ ಜಾಥಾವನ್ನು ನಡೆಸಲಾಯಿತು. ಅಧ್ಯಕ್ಷತೆಯನ್ನು ಶ್ರೀ ಪಾವಟೆ, ಪುರಾತತ್ವ ಇಲಾಖೆ, ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಜಿ.ಹೆಚ್. ಪೂಜಾರ, ಜಿಲ್ಲಾ ಕಾರ್ಯದರ್ಶಿ, ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ., ಶ್ರೀ ದೀಪಕುಮಾರ್ ಮಿಶ್ರಾ ಸಿ.ಎಸ್. ಪುರಾತತ್ವ ಇಲಾಖೆ, ಲಕ್ಕುಂಡಿಯ ವಿವಿಧ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಸ್ಕೌಟ್ ಮಾಸ್ಟರ್-ಗೈಡ್ ಕ್ಯಾಪ್ಟನ್ ಹಾಗೂ ಪುರಾತತ್ವ ಇಲಾಖೆಯ ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.

* ಅಕ್ಟೋಬರ್ 2 ರಂದು ಜಿಲ್ಲಾಡಳಿತ ವತಿಯಿಂದ ನಡೆದ ಗಾಂಧೀ ಜಯಂತಿ, ಲಾಲ್ ಬಹದ್ದೂರ್ ಶಾಸ್ತ್ರಿ ರವರ ಜಯಂತಿ ಹಾಗೂ ಪ್ಲಾಸ್ಟಿಕ್ ಮುಕ್ತ ಜಾಥಾದಲ್ಲಿ ಜಿಲ್ಲಾ ಸಂಸ್ಥೆಯಿಂದ ಸರಕಾರ ಪದವಿಪೂರ್ವ ಕಾಲೇಜಿನ ರೋವರ್ಸ್, ಶ್ರೀ ರಾಜಗಾರ, ರೋವರ್ ಸ್ಕೌಟ್ ಲೀಡರ್, ಶ್ರೀ ಎಸ್.ಎಸ್. ಹಿರೇಮಠ, ಪದವಿ ಪೂರ್ವ ಇಲಾಖೆಯ ಉಪನಿರ್ದೇಶಕರು, ಶ್ರೀ ಎ.ಎಸ್. ಶಿವುಕುಮಾರ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಭಾಗವಹಿಸಿದ್ದರು.



* ಅಕ್ಟೋಬರ್ 9 ರಂದು ಜಲಶಕ್ತಿ ನೀರು ಸಂಗ್ರಹಣೆಯ ಬಗ್ಗೆ ಜನರಲ್ಲಿ ಅರಿವು ಮೂಡಿಸುವ ಜಾಥಾವನ್ನು ಡೋಣ ಗ್ರಾಮದಲ್ಲಿ, ಮುಂಡರಗಿ ತಾಲ್ಲೂಕಿನಲ್ಲಿ ಸರಕಾರಿ ಪ್ರೌಢಶಾಲೆಯ ಸ್ಕೌಟ್ಸ್‌ಗಳು ಪ್ರಮುಖ ಬೀದಿಗಳಲ್ಲಿ ನಡೆಸಿದರು. ಜಾಥಾದ ನೇತೃತ್ವವನ್ನು ಶ್ರೀ ಉಮೇಶ್ ಗಂಗಾಪುರ ಸ್ಕೌಟ್ ಮಾಸ್ಟರ್ ಹಾಗು ಶಾಲೆಯ ಮುಖ್ಯೋಪಾಧ್ಯಾಯರು, ಸಿಬ್ಬಂದಿ ವರ್ಗದವರು ವಹಿಸಿದ್ದರು.



## ಹಾಸನ

ಆಗಸ್ಟ್ 24 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಸಮುದಾಯಭವನದಲ್ಲಿ ರೋವರ್ ಸ್ಕೌಟ್ ಲೀಡರ್-ರೇಂಜರ್ ಲೀಡರ್‌ಗಳ ಸಮಾವೇಶವನ್ನು ಹಮ್ಮಿಕೊಂಡಿದ್ದು, ಈ ಸಮಾವೇಶವನ್ನು ಶ್ರೀ ರಮೇಶ್, ಉಪನಿರ್ದೇಶಕರು, ಸರ್ಕಾರಿ ಪದವಿ ಪೂರ್ವ ಶಿಕ್ಷಣ ಇಲಾಖೆ, ಹಾಸನ ಇವರು ಗಿಡಕ್ಕೆ ನೀರೆರೆಯುವುದರ ಮೂಲಕ ಉದ್ಘಾಟಿಸಿ ಮಾತನಾಡುತ್ತ ಯುವಕ ಮತ್ತು ಯುವತಿಯರಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಶಿಸ್ತು, ಸಂಯಮ, ಸೇವಾ ಮನೋಭಾವದ ಜೊತೆಗೆ ಜೀವನ ಕೌಶಲಗಳನ್ನು ವೃದ್ಧಿಸುತ್ತದೆ ಹಾಗೆಯೇ ಇಲ್ಲಿನ ಮೋಟೋ ಹೇಳುವಂತೆ ಸೇವೆಯೇ ಮೊದಲ ಆದ್ಯತೆ ಎಂದು ತಿಳಿಸಿದರು.



ಈ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದಂತಹ ಜಿಲ್ಲಾ ಮುಖ್ಯ ಆಯುಕ್ತರಾದ ಡಾ|| ವೈ.ಎಸ್. ವೀರಭದ್ರಪ್ಪನವರು ಮಾತನಾಡಿ ಕಾಲೇಜು ಶಿಕ್ಷಣದಲ್ಲಿ ನಿಮ್ಮಂತಹ ಉಪನ್ಯಾಸಕರು ತರಬೇತಿ ಪಡೆದುಕೊಂಡು ರೋವರ್ಸ್-ರೇಂಜರ್ಸ್ ಘಟಕಗಳನ್ನು ತೆರೆದು ಮಕ್ಕಳಿಗೆ ರಾಜ್ಯ ಪುರಸ್ಕಾರ್ ಹಾಗೂ ರಾಷ್ಟ್ರಪುರಸ್ಕಾರ್ ಕೊಡಿಸಿದರೆ ಅಂತಹ ಮಕ್ಕಳಿಗೆ ಉನ್ನತ ವ್ಯಾಸಂಗದಲ್ಲಿ ಹಾಗೂ ವೃತ್ತಿ ಸೇರ್ಪಡೆಗೆ ಮೀಸಲಾತಿ ಇರುವುದರಿಂದ ಇದರ ಸದುಪಯೋಗ ಪಡೆದುಕೊಳ್ಳಲು ತಿಳಿಸಿದರು. ಸಮಾರಂಭದಲ್ಲಿ ಜಿಲ್ಲಾ ಸ್ಥಾನಿಕ ಆಯುಕ್ತ ಶ್ರೀ ಜಿ.ಡಿ. ನಾರಾಯಣ್, ಜಿಲ್ಲಾ ಉಪಾಧ್ಯಕ್ಷ ಶ್ರೀ ಗೌಡಯ್ಯ, ಜಿಲ್ಲಾ ಕಾರ್ಯದರ್ಶಿ, ಶ್ರೀ ಸುರೇಶ್ ಗುರೂಜಿ, ಜಿಲ್ಲಾ ಖಜಾಂಚಿ, ಶ್ರೀಮತಿ ಜಯಾರಮೇಶ್ ಜಿಲ್ಲಾ ಜಂಟಿ ಕಾರ್ಯದರ್ಶಿ, ಶ್ರೀಮತಿ ಕಾಂಚನಮಾಲ ಹಾಗೂ ಸಮಾವೇಶದ ಸಂಪನ್ಮೂಲ ವ್ಯಕ್ತಿಗಳಾಗಿ ಆಗಮಿಸಿದ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎಂ.ಎಸ್. ಪ್ರಕಾಶ್ ಉಪಸ್ಥಿತರಿದ್ದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿಯವರು ಸ್ವಾಗತಿಸಿದರು. ಗೈಡ್ ಕ್ಯಾಪ್ಟನ್ ಶ್ರೀಮತಿ ಬಿ.ಎಸ್. ವನಜಾಕ್ಷಿ ನಿರೂಪಿಸಿದರು. ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲಾ ಅವರು ವಂದಿಸಿದರು. 80 ರೋವರ್ ಸ್ಕೌಟ್ ಲೀಡರ್-ರೇಂಜರ್ ಲೀಡರ್‌ಗಳು ಭಾಗವಹಿಸಿದ್ದರು. ನಂತರ ಶ್ರೀ ರಮೇಶ್, ಉಪನಿರ್ದೇಶಕರು ಪದವಿ ಪೂರ್ವ ಶಿಕ್ಷಣ ಇಲಾಖೆ ಇವರನ್ನು ಸನ್ಮಾನಿಸಲಾಯಿತು.

* ಆಗಸ್ಟ್ 28 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಜಿಲ್ಲಾ ಮಟ್ಟದ ಗೀತಗಾಯನ ಕಾರ್ಯಕ್ರಮವನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ಸಮುದಾಯಭವನದಲ್ಲಿ ಆಯೋಜಿಸಲಾಗಿತ್ತು. ಹಾಸನ ಜಿಲ್ಲೆಯ ಎಂಟು ತಾಲ್ಲೂಕುಗಳಿಂದ ಆಯ್ಕೆಯಾದ ಪ್ರಥಮ ಮತ್ತು ದ್ವಿತೀಯ ಸ್ಥಾನ ಪಡೆದ ತಂಡಗಳಿಗೆ ದೇಶಭಕ್ತಿ ಗೀತಗಾಯನ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು, ಸದರಿ ಕಾರ್ಯಕ್ರಮವನ್ನು ಜಿಲ್ಲಾ ನೊಡಲ್ ಅಧಿಕಾರಿಯಾದ ಶ್ರೀಮತಿ ವೇದವತಿ ಇವರು ತಬಲವನ್ನು ಬಾರಿಸುವುದರ ಮೂಲಕ ಉದ್ಘಾಟಿಸಿ, ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಇಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರಿಂದ ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ದೇಶಭಕ್ತಿ, ದೇಶಪ್ರೇಮ, ಸಾಮಾಜಿಕ ಬದ್ಧತೆ, ಪರೋಪಕಾರ ಮುಂತಾದ ಮಾನವೀಯ ಗುಣಗಳನ್ನು ಕಲಿಸುತ್ತದೆ ಎಂದು ಅಭಿಪ್ರಾಯಪಟ್ಟರು.

ಜಿಲ್ಲಾ ಮುಖ್ಯ ಆಯುಕ್ತರಾದ ಡಾ|| ವೈ.ಎಸ್. ವೀರಭದ್ರಪ್ಪ ಅಧ್ಯಕ್ಷತೆ ವಹಿಸಿ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು



ಮಕ್ಕಳಲ್ಲಿ ಸಾಮಾಜಿಕ, ಮೌಲಿಕ, ಸಾಂಸ್ಕೃತಿಕ, ನೈತಿಕ, ಶೈಕ್ಷಣಿಕ ಹಾಗೂ ಜೊತೆಗೆ ದೇಶಭಕ್ತಿ ಮತ್ತು ದೇಶದ ಬಗ್ಗೆ ಅಭಿಮಾನ ಮೂಡಿಸುವ ನಿಟ್ಟಿನಲ್ಲಿ ರಾಜ್ಯಾದ್ಯಂತ ಪ್ರತಿ ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ ಸ್ಪರ್ಧೆ ನಡೆಸಿ ಪ್ರಥಮ ಸ್ಥಾನ ಬಂದವರಿಗೆ ರಾಜ್ಯ ಮಟ್ಟದ ಸ್ಪರ್ಧೆ ಮಾಡಿ ಉತ್ತೇಜನ ನೀಡುತ್ತಿದೆ ಎಂದು ತಿಳಿಸಿದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿಯವರು ಮಕ್ಕಳಿಗೆ ಶುಭ ಹಾರೈಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿಯವರು ಪ್ರಾಸ್ತಾವಿಕ ನುಡಿಯಲ್ಲಿ ಮಕ್ಕಳಿಗೆ ಶುಭ ಹಾರೈಸಿದರು. ವೇದಿಕೆಯಲ್ಲಿ ತೀರ್ಪುಗಾರರಾಗಿ ಆಗಮಿಸಿದ ಶ್ರೀಮತಿ ಜಯಾರಮೇಶ್, ಜಿಲ್ಲಾ ಖಜಾಂಚಿ, ಶ್ರೀಮತಿ ಶ್ರೀ ವಿಜಯ ಹಾಸನ್, ಗ್ಯಾರಂಟಿ ರಾಮಣ್ಣ ಹಾಗೂ ಶ್ರೀನಿವಾಸ ರವರು ಉಪಸ್ಥಿತರಿದ್ದರು.

* ಸೆಪ್ಟೆಂಬರ್ 8 ರಿಂದ 10 ರ ವರೆಗೆ ನಿಪುಣ್ ಪರೀಕ್ಷಾ

ಶಿಬಿರವನ್ನು ಹಮ್ಮಿಕೊಂಡಿದ್ದು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಶ್ರೀ ಹೆಚ್.ಡಿ. ದೇವೇಗೌಡ ಸ.ಪ್ರದ. ಕಾಲೇಜು, ಪಡುವಲಹಿಪ್ಪೆ, ಹೊಳೆನರಸೀಪುರ ತಾ॥ ಇವರ ಸಂಯುಕ್ತಾಶ್ರಯದಲ್ಲಿ ನಡೆದ ಈ ಶಿಬಿರಕ್ಕೆ 94 ರೋವರ್ಸ್, 127 ರೇಂಜರ್ಸ್‌ಗಳು ಭಾಗವಹಿಸಿದ್ದರು.

ಈ ಕಾರ್ಯಕ್ರಮವನ್ನು ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪ ಉದ್ಘಾಟಿಸಿ ಮಾತನಾಡುತ್ತ ವರದಕ್ಷಿಣೆ ಒಂದು ಸಾಮಾಜಿಕ ಪಿಡುಗಾಗಿದೆ. ಎಷ್ಟೋ ಹೆಣ್ಣು ಮಕ್ಕಳು ಇದರಿಂದ ಸಾವಿಗೀಡು ಆಗುತ್ತಿದ್ದರೆ



ಇದನ್ನು ತಪ್ಪಿಸಲು ತಮ್ಮಂತಹ ಯುವಜನಾಂಗ ಇದಕ್ಕೆ ಕೈಜೋಡಿಸಬೇಕು ಎಂದು ಹೇಳುತ್ತಾ ಇದೇ ಸಂದರ್ಭದಲ್ಲಿ ಭಾಗವಹಿಸಿದ ರೋವರ್ಸ್‌ಗಳಿಂದ ವರದಕ್ಷಿಣೆ ತೆಗೆದುಕೊಳ್ಳುವು-ದಿಲ್ಲವೆಂದು ಪ್ರತಿಜ್ಞೆ ಮಾಡಿಸಿದರು.

ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಉಪಾಧ್ಯಕ್ಷರು ಹಾಗೂ ಕಾರ್ಯದರ್ಶಿಯಾದ ಶ್ರೀ ಸುರೇಶ್ ಗುರೂಜಿ, ರೋವರ್ ವಿಭಾಗದ ನಾಯಕರಾದ ಶ್ರೀ ಶಿವರಾಜು, ರೇಂಜರ್ ವಿಭಾಗದ ನಾಯಕಿಯಾದ ಶ್ರೀಮತಿ ಕುಮುದ ಆರ್. ಉಪಸ್ಥಿತರಿದ್ದರು. ಪಡುವಲಹಿಪ್ಪೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಜಿ.ಡಿ. ನಾರಾಯಣ್‌ರವರು ಅಧ್ಯಕ್ಷತೆಯನ್ನು ವಹಿಸಿ ಶಿಬಿರಾರ್ಥಿಗಳಿಗೆ ಶುಭ ಹಾರೈಸಿದರು.

ಸೆಪ್ಟೆಂಬರ್ 10 ರಂದು ಜಾಥಾ ಕಾರ್ಯಕ್ರಮ ಹಾಗೂ ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳಲಾಯಿತು.

ಈ ಕಾರ್ಯಕ್ರಮದ ಮುಕ್ತಾಯ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪ ಹಾಗೂ ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀ ಪ್ರಕಾಶ್ ಎಸ್. ಯಾಜಿ ಭಾಗವಹಿಸಿದ್ದರು. ಅಧ್ಯಕ್ಷತೆಯನ್ನು ಪಡುವಲಹಿಪ್ಪೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಜಿ.ಡಿ. ನಾರಾಯಣ್ ವಹಿಸಿದ್ದರು. ನಂತರ ರೋವರ್ ವಿಭಾಗದ ಲೀಡರ್ ಶ್ರೀ ಶಿವರಾಜ್ ಮೂರು ದಿನಗಳಿಂದ ನಡೆದ ಶಿಬಿರದ ಬಗ್ಗೆ ವಿವರ ನೀಡಿದರು. ಜಿಲ್ಲಾ ಕಾರ್ಯದರ್ಶಿ ಎಲ್ಲರನ್ನು ಸ್ವಾಗತಿಸಿದರು.

## ಕಾರವಾರ

ಆಗಸ್ಟ್ 30 ರಂದು ಕಾರವಾರ ಪ್ರೀಮಿಯರ್ ಪದವಿ ಪೂರ್ವ ಕಾಲೇಜು, ರಾಜುಬಾಗ ಬಾದ ಕಾರವಾರದಲ್ಲಿ ಪದವಿ ಪೂರ್ವ ಪ್ರಾಂಶುಪಾಲರಿಗೆ ಒಂದು ದಿನದ ಮಾಹಿತಿ ಶಿಬಿರ ನಡೆಸಲಾಯಿತು. ಈ ಶಿಬಿರದಲ್ಲಿ 147 ಪ್ರಾಂಶುಪಾಲರುಗಳು ಉಪನಿರ್ದೇಶಕರು ಹಾಗೂ ಇತರೆ ಪದಾಧಿಕಾರಿಗಳು ಉಪಸ್ಥಿತರಿದ್ದರು. ಮಾಹಿತಿ ಶಿಬಿರದಲ್ಲಿ ಎ.ಎಸ್.ಓ.ಸಿ. ಶ್ರೀ ಟಿ. ಕರಿಸಿದ್ದಪ್ಪ, ಕೋಶಾಧ್ಯಕ್ಷರಾದ ಶ್ರೀ ಆರ್.ಟಿ. ಹೆಬ್ಬಾರ, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್, ಶ್ರೀಮತಿ ಪಡಿಯಾರ, ಡಿ.ಟಿ.ಸಿ., ಗೈಡ್ ಭಾಗವಹಿಸಿ ಮಾಹಿತಿ ನೀಡಿದರು. ಜಿಲ್ಲಾ ಸಂಸ್ಥೆ ವತಿಯಿಂದ ಉಪನಿರ್ದೇಶಕರಾದ ಶ್ರೀ ಎಸ್.ಜಿ. ಹೆಗಡೆ ಹಾಗೂ ಶ್ರೀ ಎಂ.ಬಿ. ಪೋಳಾ ಇವರನ್ನು ಸನ್ಮಾನಿಸಲಾಯಿತು.



* ಸೆಪ್ಟೆಂಬರ್ 9 ರಂದು ಕುಮುಟಾದ ಸ್ಥಳೀಯ ಸಂಸ್ಥೆಯ ಸಹಯೋಗದೊಂದಿಗೆ ಗಿಬ್ ಗರ್ಲ್ಸ್ ಹೈಸ್ಕೂಲು ಕುಮಟಾದಲ್ಲಿ ಜಿಲ್ಲಾ ಮಟ್ಟದ ಗೀತಗಾಯನ ಸ್ಪರ್ಧೆ ನಡೆಯಿತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಜಿ.ಜಿ. ಸಭಾಹಿತ್, ನೋಡಲ್ ಆಫೀಸರ್ ಶ್ರೀ ಹೆಚ್.ವಿ. ಗೌಡ ನಡೆಸಿಕೊಟ್ಟರು. ಈ ಕಾರ್ಯಕ್ರಮದಲ್ಲಿ ಶ್ರೀ ಆರ್.ಟಿ. ಹೆಬ್ಬಾರ್, ಕೋಶಾಧ್ಯಕ್ಷರು ಜಿಲ್ಲಾ ಗೈಡ್ ಕಮೀಷನರ್ ಶ್ರೀಮತಿ ಶೋಭಾ ಕುಲಕರ್ಣಿ ಶ್ರೀ ಎಸ್.ಎಸ್. ಭಟ್ಟ (ಪಿ.ಆರ್.ಓ.) ಶ್ರೀ ಕೆ.ಪಿ. ಭಂಡಾರಿ ಕಾರ್ಯದರ್ಶಿ, ಶ್ರೀಮತಿ ಸುಧಾಗೌಡ, ಕಾರ್ಯಾಧ್ಯಕ್ಷರು ಎ.ಎಸ್.ಓ.ಸಿ. ಶ್ರೀ ಟಿ. ಕರಿಸಿದ್ದಪ್ಪ, ಸ್ಕೌಟರ್ಸ್-ಗೈಡರ್ಸ್ ಹಾಗೂ 110 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು. ನಿರ್ಣಾಯಕರಾಗಿ ಶ್ರೀಮತಿ ಶಾರದಾ ಹೆಗಡೆ ಶ್ರೀಮತಿ ತಾರಾಭಟ್ಟ, ಶ್ರೀ ವೇಣುಗೋಪಾಲ, ಶ್ರೀ ಚಕ್ರವರ್ತಿ ಇವರುಗಳು ಭಾಗಹಿಸಿದ್ದರು.



## ಕೊಡಗು



ಸೆಪ್ಟೆಂಬರ್ 24 ರಂದು ಕೊಡಗು ಜಿಲ್ಲಾ ಸಂಸ್ಥೆಯಿಂದ ಜಿಲ್ಲಾ ಸ್ಕೌಟ್ ಭವನದಲ್ಲಿ "ಜಿಲ್ಲಾ ಮಟ್ಟದ ದೇಶಭಕ್ತಿ ಗೀತಗಾಯನ ಸ್ಪರ್ಧೆ" ನಡೆಯಿತು. ಕಾರ್ಯಕ್ರಮದಲ್ಲಿ ಹಿರಿಯ ಸಿವಿಲ್ ನ್ಯಾಯಾಧೀಶರಾದ ಶ್ರೀಮತಿ ನೂರುನ್ನೀಸಾ ಅವರು ಮಾತನಾಡಿ ಜನಪದ, ದೇಶಭಕ್ತಿ ಗೀತೆ, ಭರತನಾಟ್ಯ ಇಂತಹ ಕಲೆಗಳನ್ನು ಮರೆಯುವಂತಾಗುತ್ತಿದೆ. ಮಕ್ಕಳಲ್ಲಿ ಇದರ ಬಗ್ಗೆ ಹೆಚ್ಚಿನ ಆಸಕ್ತಿ ಮೂಡಿಸುವಂತಾಗಬೇಕು. ಸಂಸ್ಕೃತಿ ಉಳಿಸಿ ಬೆಳೆಸಬೇಕೆಂದು ಅವರು ಹೇಳಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕಾಳಪ್ಪ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಜಿಮ್ಮಿ ಸೆಕ್ವೇರಾ, ಖಜಾಂಚಿ ಶ್ರೀ ಸುನೀಲ್ ಇತರ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ತಾಲ್ಲೂಕ ಮಟ್ಟದಲ್ಲಿ ಪ್ರಥಮ ಸ್ಥಾನ ಪಡೆದ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳು ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಶ್ರೀಮತಿ ದಮಯಂತಿ ಕಾರ್ಯಕ್ರಮ ನಿರೂಪಿಸಿದರು.



## ಕೋಲಾರ

ಸೆಪ್ಟೆಂಬರ್ 25 ರಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಖಾದ್ರಿಪುರ ಶಾಲೆಯಲ್ಲಿ "ರಾಷ್ಟ್ರೀಯ ಜಂತುಹುಳು ನಿವಾರಣಾ ದಿನ" ಅಂಗವಾಗಿ ಜಾಥ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಮುಖ್ಯೋಪಾಧ್ಯರಾದ ಶ್ರೀಮತಿ ಎನ್. ಉಮಾದೇವಿ, ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವಿ. ಬಾಬು ಜಿಲ್ಲಾ ಸಂಘಟಕ, ಶ್ರೀ ವಿ. ವಿಶ್ವನಾಥ, ಶಾಲೆಯ ಶಿಕ್ಷಕರು ಹಾಗೂ ಮಕ್ಕಳು ಭಾಗವಹಿಸಿದರು.

* ಸೆಪ್ಟೆಂಬರ್ 20 ರಂದು ಮುಳಬಾಗಿಲಿನ ಕುರುಡುಮಲೆ ಬೆಟ್ಟದ ಅರಣ್ಯ ಇಲಾಖೆ, ಭಾರತ್ ಸ್ಕೌಟ್ಸ್-ಗೈಡ್ಸ್ ಕೋಲಾರ ಜಿಲ್ಲೆ, ಪರ್ವ ಟೀಮ್ ಸಂಯುಕ್ತ ಆಶ್ರಯದಲ್ಲಿ ಸೀಡ್ ಬಾಲ್ ಮತ್ತು ಗಿಡ ನೆಡುವ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಅರಣ್ಯ ಇಲಾಖೆಯ ವಲಯಾಧಿಕಾರಿಗಳಾದ ಶ್ರೀ ಭರತ್ ಕುಮಾರ್ ಕಾರ್ಯಕ್ರಮಕ್ಕೆ ಚಾಲನೆ ನೀಡಿ ವಿದ್ಯಾರ್ಥಿಗಳು ತಮ್ಮ ಅಮೂಲ್ಯವಾದ ಬಿಡುವಿನ ಸಮಯವನ್ನು ಪರಿಸರ ರಕ್ಷಣೆಗೆ ಬಳಸಬಹುದು ಎಂದು ತಿಳಿಸಿದರು. ಈ ಸಂದರ್ಭದಲ್ಲಿ ಸುಮಾರು 8000 ಸೀಡ್ ಬಾಲ್ ತಯಾರಿಸಲಾಯಿತು. 250 ಕ್ಕೂ ಹೆಚ್ಚು ಗಿಡಗಳನ್ನು ನೆಡಲಾಯಿತು. ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವಿ. ಬಾಬು, ಜಿಲ್ಲಾ ಸಂಘಟಕ ಶ್ರೀ ವಿ. ವಿಶ್ವನಾಥ, ರೋವರ್ ಲೀಡರ್ ಶ್ರೀ ಮೋಹನ್ ರೆಡ್ಡಿ, ಹಿರಿಯ ರೋವರ್‌ಗಳಾದ ಚೇತನ್, ಭರತ್, ದಿಲೀಪ್, ಕುಪೇಂದ್ರಗೌಡ, ಪರ್ವ ತಂಡದ ಹರಿನಾಥ್, ಕೇಶವ ರವಿ ಹಾಗೂ ವಿದ್ಯಾರ್ಥಿಗಳು ಭಾಗವಹಿಸಿದ್ದರು.

* ಅಕ್ಟೋಬರ್ 2 ರಂದು ಮಹಾತ್ಮಾ ಗಾಂಧೀಜಿ ಮತ್ತು ಲಾಲ್‌ಬಹದ್ದೂರ್ ಶಾಸ್ತ್ರಿ ರವರ ಜನ್ಮ ದಿನಾಚರಣೆಯನ್ನು ಜಿಲ್ಲಾ ಸಂಸ್ಥೆಯ ವತಿಯಿಂದ ಸರ್ಕಾರಿ ಮಹಿಳಾ ಕಾಲೇಜು ಕೋಲಾರ ಇಲ್ಲಿ ಆಯೋಜಿಸಲಾಗಿತ್ತು. ಸಮಾರಂಭವು ಸರ್ವಧರ್ಮ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ನಂತರ ಕಾಲೇಜು ಆವರಣ ಮತ್ತು ಗಾಂಧೀನಗರದಲ್ಲಿ ಸ್ವಚ್ಛತಾ ಅಭಿಯಾನವನ್ನು ಹಮ್ಮಿಕೊಳ್ಳಲಾಯಿತು. ಜನಜಾಗೃತಿ ವೇದಿಕೆ, ಶ್ರೀ ಧರ್ಮಸ್ಥಳ ಗ್ರಾಮೀಣಾಭಿವೃದ್ಧಿ ಸಂಸ್ಥೆ ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಆಶ್ರಯದಲ್ಲಿ







ಸಾರ್ವಜನಿಕರಿಗೆ ಪ್ಲಾಸ್ಟಿಕ್ ಮತ್ತು ಮದ್ಯಪಾನದ ಬಗ್ಗೆ ಅರಿವು ಮೂಡಿಸುವ ಜಾಥಾವನ್ನು ಕೋಲಾರ ನಗರದ ಪ್ರಮುಖ ರಸ್ತೆಗಳಲ್ಲಿ ನಡೆಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ರಾಜೇಂದ್ರಚಾರಿ, ಬಿಸಪ್ಪಗೌಡ, ಉಪಾಧ್ಯಕ್ಷರಾದ ಶ್ರೀ ಗೋಪಾಲರೆಡ್ಡಿ, ಚೌಡೇಶ್ವರಿ ರಾಮು, ಶ್ರೀಮತಿ ಮಂಜುಳ ಬೀಮ್‌ರಾವ್, ಜಿಲ್ಲಾ ಪದಾಧಿಕಾರಿಗಳು, ರೇಂಜರ್ ಲೀಡರ್ ಶ್ರೀಮತಿ ಕೆ.ಆರ್. ಮಂಜುಳ, ಶ್ರೀಮತಿ ಎಂ. ಮಂಜುಳ ಹಾಗೂ ಉಪನ್ಯಾಸಕರು, ಶಿಕ್ಷಕರು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂರ್ಸ್ ಭಾಗವಹಿಸಿದ್ದರು ಹಾಗೂ ಜಿಲ್ಲೆಯ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಮತ್ತು ಶಾಲೆಗಳಲ್ಲಿ ಗಾಂಧೀ ಜಯಂತಿಯನ್ನು ಆಚರಿಸಲಾಯಿತು.

* ಅಕ್ಟೋಬರ್ 5 ರಂದು ಕೋಲಾರ ನಗರದ ಬಿ.ಇ.ಓ. ಕಛೇರಿ ಆವರಣದಲ್ಲಿ ಪಯನಿಯರಿಂಗ್ ಪದಕದ ಬಗ್ಗೆ ತರಬೇತಿಯನ್ನು ಆಯೋಜಿಸಲಾಗಿತ್ತು. ಸುಮಾರು 120 ಸ್ಕೌಟ್‌ಗಳು ಭಾಗವಹಿಸಿದ್ದರು

* ಅಕ್ಟೋಬರ್ 2ರಂದು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಬಂಗಾರಪೇಟೆ ಸ್ಕೌಟ್ಸ್-ಗೈಡ್ಸ್ ಪಾರ್ಕ್ ಆವರಣದಲ್ಲಿ ರೋವರ್-ರೇಂಜರ್ ತಂಡಗಳಿಂದ 1000 ಸಸಿಗಳನ್ನು ನೀಡಲಾಯಿತ್ತು. ಈ ಸಂದರ್ಭದಲ್ಲಿ ಪ್ರಾಂಶುಪಾಲರಾದ ಶ್ರೀ ಮುನಿಸ್ವಾಮಪ್ಪ, ರೋವರ್ ಲೀಡರ್, ಡಾ॥ ಈರಣ್ಣ, ರೇಂಜರ್ ಲೀಡರ್ ಶ್ರೀಮತಿ ಜ್ಯೋತಿ ಜಿಲ್ಲಾ ಸಂಘಟಕ ಶ್ರೀ ವಿ. ಬಾಬು, ಶ್ರೀ ನಂಜುಂಡಪ್ಪ ಹಾಗೂ ಇತರರು ಭಾಗವಹಿಸಿದ್ದರು.

* ಅಕ್ಟೋಬರ್ 11 ರಿಂದ 13 ರ ವರೆಗೆ ಕೋಲಾರ ನಗರದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಆವರಣದಲ್ಲಿ ಜಿಲ್ಲಾ ಮಟ್ಟದ ಪ್ರೇರಣ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ಮಹಿಳೆ ಮತ್ತು ಕಾನೂನು, ಮಹಿಳೆಯರ ಆರೋಗ್ಯ ಸ್ಥಿತಿ, ಬಾಲ್ಯವಿವಾಹ, ಮಹಿಳೆಯರ ದೌರ್ಜನ್ಯ, ಉದ್ಯೋಗಸ್ಥ ನಿಯಮಗಳ ಬಗ್ಗೆ ಉಪನ್ಯಾಸ, ಸ್ಪರ್ಧಾತ್ಮ ಪರೀಕ್ಷೆಗಳನ್ನು ಎದುರಿಸುವ ಬಗ್ಗೆ, ಮಹಿಳೆಯರ ಹಕ್ಕು ಮತ್ತು ಕಾಯ್ದೆಗಳು, ವಿಶೇಷ ನಿಯಮಗಳ ಬಗ್ಗೆ ಉಪನ್ಯಾಸ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಗುಂಪು ಚರ್ಚೆ, ರಸಪ್ರಶ್ನೆ, ಯುವಧ್ವನಿ, ಗುಂಪು ಸಂಭಾಷಣೆ, ಶಿಬಿರಾಗ್ನಿ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ನಾಯಕಿಯಾಗಿ ಡಾ॥ ಕೆ.ಆರ್. ಮಂಜುಳ ಕಾರ್ಯನಿರ್ವಹಿಸಿದರು. ಸಹಾಯಕರಾಗಿ ಶ್ರೀಮತಿ ಎನ್. ಉಮಾದೇವಿ ಎಲ್.ಟಿ. (ಗೈ), ಶ್ರೀಮತಿ ಎಂ.ಎಲ್. ಮಂಜುಳ, ರೇಂಜರ್ ಲೀಡರ್ ಹಾಗೂ ಜಿಲ್ಲಾ ಸಂಘಟಕ ಶ್ರೀ ವಿ. ಬಾಬು, ಶ್ರೀ ವಿಶ್ವನಾಥ, ಕಾರ್ಯನಿರ್ವಹಿಸಿದರು. ಶ್ರೀಮತಿ ಎಂ. ಸವಿತ ಬಿ.ಆರ್.ಪಿ.ಬಿ.ಆರ್.ಸಿ., ಶ್ರೀಮತಿ ಸಿ. ಗೀತಾ ಜಿಲ್ಲಾ ಆರೋಗ್ಯಾಧಿಕಾರಿಗಳು, ಶ್ರೀಮತಿ ಮಂಜುಳ ಕನಿಕಾ ವಕೀಲರು ಮತ್ತು ಸಾಹಿತಿಗಳು ಡಾ॥ ಪ್ರಸನ್ನಕುಮಾರಿ, ಸರ್ಕಾರಿ ಕಾನೂನು ಕಾಲೇಜು, ಕೋಲಾರ, ಶ್ರೀಮತಿ ರತ್ನಮ್ಮ ವಕೀಲರು, ಶ್ರೀ ಎಸ್. ಮುನಿಸ್ವಾಮಿ ಗೌಡ ಹಿರಿಯ ಸಾರ್ವಜನಿಕ ಕಾನೂನು ಸಲಹೆಗಾರರು, ಶ್ರೀ ರಾಕೇಶ್, ಇನ್ಪೋಟಿಕ್ ಕೇಂದ್ರ ರವರು ವಿಶೇಷ ಉಪನ್ಯಾಸ ನೀಡಿದರು.

ಈ ಶಿಬಿರವನ್ನು ಜಿಲ್ಲಾ ವಾರ್ತಾ ಸಹಾಯಕರಾದ ಶ್ರೀ ರಮೇಶ್ ರವರು ಉದ್ಘಾಟಿಸಿದರು, ಬಿ.ಇ.ಓ., ಶ್ರೀ ನಾಗರಾಜಗೌಡ, ಅಧ್ಯಕ್ಷತೆ ವಹಿಸಿದ್ದರು, 2ನೇ ದಿನದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಶಿಬಿರವನ್ನು ವೀಕ್ಷಣೆ ಮಾಡಿ ಎಲ್ಲರಿಗೂ ಶುಭಕೋರಿದರು.

* ಅಕ್ಟೋಬರ್ 13 ರಂದು ಮತದಾರರ ಪರಿಶೀಲನೆಯ ಬಗ್ಗೆ ಕೋಲಾರ ನಗರದ ರಸ್ತೆಗಳಲ್ಲಿ ಅರಿವು ಮೂಡಿಸಲಾಯಿತ್ತು. ಜಾಥ ಕಾರ್ಯಕ್ರಮಕ್ಕೆ ಜಿಲ್ಲಾ ಪಂಚಾಯತ್ ಉಪ ಮುಖ್ಯ ಕಾರ್ಯದರ್ಶಿ ಶ್ರೀ ಸಂಜೀವಪ್ಪ ಮತ್ತು ಜಿಲ್ಲಾ ಸ್ವೀಪ್ ನೋಢಲ್ ಅಧಿಕಾರಿ ಎಂ. ಸಾಮ್ಯ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಶ್ರೀ ಗೋವಿಂದ ಗೌಡ, ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಜಿಲ್ಲಾ ಸಂಘಟಕರಾದ ವಿ. ಬಾಬು ವಿ. ವಿಶ್ವನಾಥ, ಉಮಾದೇವಿ, ಮಂಜುಳ, ಸುಮಿತ್ರಮ್ಮ ಹಾಗೂ ಇತರರು ಹಾಜರಿದ್ದರು.

* ಸೆಪ್ಟೆಂಬರ್ 22 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ವತಿಯಿಂದ "ಭಾರತ್ ಸ್ಕೌಟ್ಸ್-ಗೈಡ್ಸ್ ನಡಿಗೆ ಗ್ರಾಮೀಣ ಆಟಗಳ ಕಡೆ" ಶೀರ್ಷಿಕೆ ಅಡಿಯಲ್ಲಿ ಕಬ್ಬಡಿಪಂದ್ಯಾವಳಿಗಳನ್ನು ಕೆ.ಪಿ.ಎಸ್. ಶಾಲೆ ಸುಂದಪಾಳ್ಯ ಇಲ್ಲಿ

ಆಯೋಜಿಸಲಾಗಿತ್ತು. 34 ತಂಡ ಭಾಗವಹಿಸಿದವು. ಎ.ಡಿ.ಸಿ. ಸತೀಶ್, ತರಬೇತಿ ನಾಯಕ ನಂಜುಂಡಪ್ಪ, ಕಾರ್ಯದರ್ಶಿ ಶ್ರೀ ಶಂಕರಪ್ಪ, ನಾರಾಯಣಸ್ವಾಮಿ, ಪುರುಷೋತ್ತಮರೆಡ್ಡಿ ಹಾಗೂ ಮುಂತಾದವರು ಭಾಗವಹಿಸಿದ ಯಶಸ್ವಿಗೊಳಿಸಿದರು.

## ಮಂಡ್ಯ

ಆಗಸ್ಟ್ 31ರಂದು "ಚಿಣ್ಣರ ವನ ದರ್ಶನ" ಕಾರ್ಯಕ್ರಮದ ಅಡಿಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್, ಸ್ಥಳೀಯ ಸಂಸ್ಥೆ, ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಅರಣ್ಯ ಇಲಾಖೆ, ಶ್ರೀರಂಗಪಟ್ಟಣ ಸಹಯೋಗದಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಟಿ.ಎಂ. ಹೊಸೂರು ಇಲ್ಲಿನ ಬುಲ್‌ಬುಲ್ಸ್-ಗೈಡ್ಸ್, ಶಾಲೆ ಮಕ್ಕಳಿಗೆ ಅರಣ್ಯದ ಮಾಹಿತಿ, ಬೀಜದುಂಡೆ ಬಿತ್ತನೆ, ಸ್ವಚ್ಛತೆ ಕಾರ್ಯಕ್ರಮವನ್ನು ಕರಿಘಟ್ಟದಲ್ಲಿ ಹಮ್ಮಿಕೊಂಡಿದ್ದರು. ಈ ಸಂದರ್ಭದಲ್ಲಿ ಬೀಜದುಂಡೆ ಬಿತ್ತನೆ ಮಾಡಿ ಮಾತನಾಡಿದ ಶ್ರೀ ರುಕ್ಸಾನಾ ನರ್ಸೇ, ಕ್ಷೇತ್ರ ಶಿಕ್ಷಣಾಧಿಕಾರಿ ಅವರು ಬೀಜದುಂಡೆ ಬಿತ್ತನೆ, ಸಸಿಗಳು ನೆಡುವುದು ಅದರ ಪೋಷಣೆ ಮಾಡುವುದು ನೀವು ಮುಂದಿನ ಜನಾಂಗಕ್ಕೆ ಕೊಡುವ ಕೊಡುಗೆ ಎಂದು ತಿಳಿಸಿದರು. ಪ್ರಕೃತಿಯನ್ನು ಕಾಪಾಡುವ ಜವಾಬ್ದಾರಿ ನಮ್ಮದು. ಪ್ಲಾಸ್ಟಿಕ್ ಬಳಸಬಾರದು, ನೀರನ್ನು ಮಿತ ಬಳಕೆ ಮಾಡುವಂತೆ ಕಿವಿ ಮಾತು ತಿಳಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಸತ್ಯನಾರಾಯಣ ಬಿ.ಆರ್.ಸಿ. ಶ್ರೀಮತಿ ಪದ್ಮ, ಅಜೀಮ್ ಪ್ರೇಮ್ ಜೀ ಫೌಂಡೇಶನ್, ಜಿ.ಆರ್. ರಮೇಶ್, ಶ್ರೀ ಮರಿಯಪ್ಪ, ಐ.ಆರ್.ಟಿ. ಸಂಪನ್ಮೂಲ ವ್ಯಕ್ತಿಗಳು, ಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ಎಲ್. ಭಾಗ್ಯವತಿ ಮತ್ತಿತರರು ಭಾಗವಹಿಸಿದ್ದರು.



## ರಾಯಚೂರು

ಸೆಪ್ಟೆಂಬರ್ 9ರಂದು ಅಂತರ್‌ರಾಷ್ಟ್ರೀಯ ಶಾಂತಿಪಾಲನಾ ದಿನಾಚರಣೆಯ ಅಂಗವಾಗಿ ಸ್ವಚ್ಛತಾ ಕಾರ್ಯಕ್ರಮವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಎಲ್.ವಿ.ಡಿ. ಮಹಾವಿದ್ಯಾಲಯದ ರೋವರ್ ಲೀಡರ್ ಡಾ॥ ಪ್ರಶಾಂತ್ ಕುಮಾರ್ ಮತ್ತು ರೋವರ್ಸ್‌ಗಳು ಭಾಗವಹಿಸಿದ್ದರು. ಅಧ್ಯಕ್ಷತೆಯನ್ನು ಶ್ರೀಮತಿ ಆಲೀಯಾ ಖಾನಂ, ಜಿಲ್ಲಾ ಆಯುಕ್ತರು(ಗೈಡ್) ವಹಿಸಿಕೊಂಡಿದ್ದರು. ಅತಿಥಿಗಳಾಗಿ ಡಾ॥ ಪ್ರಶಾಂತ್ ಕುಮಾರ್, ಶ್ರೀ ಬಸವರಾಜ್ ಬೋರೆಡ್ಡಿ, ಜಿಲ್ಲಾ ಆಯುಕ್ತರು (ಸ್ಕೌಟ್), ಶ್ರೀ ಆರ್.ಎಚ್. ಸಾಗರ್, ಸ್ಥಳೀಯ ಸಂಸ್ಥೆ ಅಧ್ಯಕ್ಷರು ಹಾಗೂ ಇತರರು ಭಾಗವಹಿಸಿದ್ದರು. ಶ್ರೀ ನಾಗೇಶ್ ಗೌಡ, ಡಿ.ಟಿ.ಸಿ. (ಸ್ಕೌಟ್) ಅವರು ವಂದನಾರ್ಪಣೆ ಮಾಡಿದರು.

* ಸೆಪ್ಟೆಂಬರ್ 21 ರಂದು ರಾಯಚೂರು ತಾಲ್ಲೂಕಿನ ದಿನ್ನಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಡಾ॥ ಸಂಗಮೇಶ್ವರ ಸರದಾರ ಸ್ಕೌಟ್ ಹಾಗೂ ಶ್ರೀಮತಿ ಎಸ್.ಕೆ. ಪ್ರಭಾ ಗೈಡ್ ಘಟಕದ ವತಿಯಿಂದ "ಅಂತರ್‌ರಾಷ್ಟ್ರೀಯ ಶಾಂತಿ ದಿನವನ್ನು" ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ರಾಯಚೂರು ಗ್ರಾಮೀಣ ಶಾಸಕ ಶ್ರೀ ಬಸನಗೌಡ ದದ್ದಲ್ ಭಾಗವಹಿಸಿ ಮಾತನಾಡಿ, ಮಹಾತ್ಮಾ ಗಾಂಧೀಜಿ, ಮದರ್ ಥೆರೇಸಾ, ಸ್ವಾಮಿ ವಿವೇಕಾನಂದ, ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂ ರಂಥವರ ತತ್ವ, ಉದ್ದೇಶ, ಶಾಂತಿಯ ಸಂದೇಶಗಳು, ಅವರ ಆಚಾರ-ವಿಚಾರಗಳು ಇವತ್ತು ಜಗತ್ತಿಗೆ ಮಾದರಿಯಾಗಿವೆ. ಆಧುದರಿಂದಲೇ ನಮ್ಮ ಭಾರತ ದೇಶ ಶಾಂತಿಗೆ ಹೆಸರುವಾಸಿಯಾಗಿದೆ ಎಂದು ತಿಳಿಸಿದರು.

ಈ ಸಂದರ್ಭದಲ್ಲಿ ರಾಯಚೂರು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಚಂದ್ರಶೇಖರ ದೊಡ್ಡಮನಿ, ಮಾಜಿ ಜಿಲ್ಲಾ ಪಂಚಾಯತ್ ಸದಸ್ಯ ಶ್ರೀ ಬಷೀರುದ್ದೀನ್, ಮಾಜಿ ಬ್ಲಾಕ್ ಕಾಂಗ್ರೆಸ್



ಅಧ್ಯಕ್ಷ ಶ್ರೀ ಸಿದ್ದನಗೌಡ ಗಾರಲದಿನ್ನಿ, ಶ್ರೀ ಬಿ. ರಮೇಶ, ನಗರ ಸಭೆ ಸದಸ್ಯರು, ಶ್ರೀ ರಾಜಪ್ಪಗೌಡ ಮಾಲೀಪಾಟೀಲ್, ಶ್ರೀ ನಾಗೇಂದ್ರಪ್ಪ ಮಟಮಾರಿ, ಶ್ರೀಮತಿ ಈರಮ್ಮ ಮಹಾದೇವ, ಅಧ್ಯಕ್ಷರು, ಗ್ರಾಮ ಪಂಚಾಯತಿ ಶ್ರೀಮತಿ ಸೌಭಾಗ್ಯ ಶಿವಪ್ಪ, ಅಧ್ಯಕ್ಷರು ಎಸ್.ಡಿ.ಎಂ.ಸಿ. ಶಾಲೆಯ ಮುಖ್ಯ ಗುರುಮಾತೆ ಶ್ರೀಮತಿ ಶರಣಮ್ಮ ಇದ್ದರು. ಈ ಸಂದರ್ಭದಲ್ಲಿ ಗ್ರಾಮಪಂಚಾಯತಿ ಸದಸ್ಯರು, ಎಸ್.ಡಿ.ಎಂ.ಸಿ. ಸದಸ್ಯರು, ಶಾಲಾ ಶಿಕ್ಷಕ ವರ್ಗದವರು ಮತ್ತು ಮಕ್ಕಳು ಉಪಸ್ಥಿತರಿದ್ದರು.

* ಅಕ್ಟೋಬರ್ 02 ರಂದು ರಾಯಚೂರು ತಾಲ್ಲೂಕಿನ ದಿನ್ನಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಡಾ॥ ಸಂಗಮೇಶ್ವರ ಸರದಾರ, ಸ್ಕೌಟ್ ಘಟಕ ಹಾಗೂ ಶ್ರೀಮತಿ ಎಸ್.ಕೆ. ಪ್ರಭಾ, ಗೈಡ್ ಘಟಕದಿಂದ 150ನೇ ಮಹಾತ್ಮಾ ಗಾಂಧಿ ಜಯಂತಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರೀಯವರ ಜಯಂತಿಯನ್ನು ವಿಶೇಷವಾಗಿ ಆಚರಿಸಲಾಯಿತು. ಸ್ಕೌಟ್ಸ್-ಗೈಡ್ಸ್‌ಗಳಿಂದ ಸ್ವಚ್ಛತೆಯ ಪ್ರತಿಜ್ಞಾವಿಧಿ ಸ್ವೀಕರಿಸಿ ನಂತರ ಗ್ರಾಮದಲ್ಲಿ ಸ್ವಚ್ಛತಾ ಕಾರ್ಯಕ್ರಮ ನಡೆಸಲಾಯಿತು. ಈ ಸಂದರ್ಭದಲ್ಲಿ ಶ್ರೀ ನರಸಿಂಹನಾಯಕ, ಶಿಕ್ಷಕರು ಮಹಾತ್ಮಾಗಾಂಧಿಜಿಯವರ



ಕುರಿತು ಮಾತನಾಡಿ, ಗಾಂಧೀಜಿಯವರ ರಾಮರಾಜ್ಯದ ಕನಸನ್ನು ನನಸು ಮಾಡಲು ನಾವೆಲ್ಲರೂ ಪ್ರಾಮಾಣಿಕವಾಗಿ ಶ್ರಮಿಸಬೇಕುಎಂದರು. ಈ ಸಂದರ್ಭದಲ್ಲಿ ಶಾಲೆಯ ಮುಖ್ಯೋಪಾಧ್ಯಾಯನಿ ಶ್ರೀಮತಿ ಶರಣಮ್ಮ, ಎಸ್.ಡಿ.ಎಂ.ಸಿ. ಸದಸ್ಯರಾದ ಶ್ರೀ ದುಳ್ಳಯ್ಯ ನಾಯಕ, ಶ್ರೀ ಗಿರಿಯಪ್ಪ, ಸ್ಕೌಟ್‌ಮಾಸ್ಟರ್ ಶ್ರೀ ರಾವುತರಾವ್ ಬರೂರ, ಗೈಡ್ ಕ್ಯಾಪ್ಟನ್ ಶ್ರೀಮತಿ ರಶ್ಮಿ, ಹಾಗೂ ಶಾಲೆಯ ಶಿಕ್ಷಕರು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಅಕ್ಟೋಬರ್ 3 ರಂದು ಲಿಂಗಸುಗೂರು ತಾಲೂಕ ಮಟ್ಟದ ಸ್ಕೌಟರ್ಸ್-ಗೈಡ್ಸ್ ಸಮಾವೇಶವನ್ನು ಲಿಂಗಸುಗೂರಿನ ಗುರುಭವನದಲ್ಲಿ ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಎಸ್. ಮುಕ್ಕಣ್ಣನವರ್ ತಾಲೂಕ. ದೈಹಿಕ ಶಿಕ್ಷಣ ಪರಿವೀಕ್ಷಕರು ಲಿಂಗಸುಗೂರು ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಮತ್ತು ಉದ್ಘಾಟಕರಾಗಿ ಎಲ್.ಬಿ. ಹೊರಪ್ಯಾಟೆ ಜಿಲ್ಲಾ ಸ್ಥಾನಿಕ ಆಯುಕ್ತರು ರಾಯಚೂರು ಇವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಹಾಗೂ ಅತಿಥಿಗಳಾಗಿ ಶ್ರೀ ಶರಣಪ್ಪ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಲಿಂಗಸುಗೂರು, ಶ್ರೀ ಬಸವರಾಜ ಕರಡಿ, ಪ್ರಾ.ಶಾ.ಶಿ. ಸಂಘದ ಅಧ್ಯಕ್ಷರು ಲಿಂಗಸುಗೂರು, ಶ್ರೀ ಭೀಮಣ್ಣ ನಾಯಕ ಸ.ನೌ.ಸಂ. ಅಧ್ಯಕ್ಷರು ಲಿಂಗಸುಗೂರು, ಶ್ರೀ ಗುರುಸಂಗಯ್ಯ, ಸ.ನೌ.ಸಂ. ಲಿಂಗಸುಗೂರು, ಶ್ರೀ ರಾಜಗೌಡ, ರಾಜ್ಯ ಮಟ್ಟದ ಉತ್ತ ಶಿಕ್ಷಕರು, ಶ್ರೀ ಕುಮಾರ ಅಂಬಣ್ಣ, ಸ್ಕೌಟ್ಸ್-ಗೈಡ್ಸ್ ಸ್ವಯಂ ಸೇವಕರುಗಳು ಉಪಸ್ಥಿತರಿದ್ದರು. ಶ್ರೀ ಶಶಿಕಾಂತರಾವ್ ದೇಸಾಯಿ ತರಬೇತಿ ಸಲಹೆಗಾರರು ಇವರು ಸ್ವಾಗತಿಸಿದರು. ಶ್ರೀ ಎಚ್.ಕೆ. ಲಿಂಗಯ್ಯ ವಂದಿಸಿದರು. ಶ್ರೀ ಜಗದೀಶ್ ಸ್ಕೌಟ್ ಮಾಸ್ಟರ್ ಕಾರ್ಯಕ್ರಮ ನಿರೂಪಿಸದರು. ತಾಲೂಕಿನ ವಿವಿಧ ಶಾಲೆಗಳಿಂದ 25ಸ್ಕೌಟ್ ಮಾಸ್ಟರ್ & ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು.

* ಅಕ್ಟೋಬರ್ 2ರಂದು ಜಿಲ್ಲಾ ಸಂಸ್ಥೆಯಿಂದ ಗಾಂಧಿ ಜಯಂತಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರೀಜಿ ಯವರ ಜಯಂತಿಯನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಆಚರಣೆ ಮಾಡಿ ನಂತರ ಜಿಲ್ಲಾ ಆಡಳಿತ ವತಿಯಿಂದ ಹಮ್ಮಿಕೊಂಡಿದ್ದ ಜಿಲ್ಲಾ ಕ್ರೀಡಾಂಗಣ ಹತ್ತಿರ ಮಹಾತ್ಮಾ ಗಾಂಧೀಜಿಯವರ 150ನೇ ಜನ್ಮ ದಿನಾಚರಣೆ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯಿಂದ ವಿವಿಧ ಶಾಲೆಗಳ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ಹಾಗೂ 150 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀಮತಿ ಅಜೀಜಾ ಸುಲ್ತಾನ್, ಪ್ರಭಾರಿ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ಕೆ. ಆಲಿಯಾ ಖಾನಂ ಜಿಲ್ಲಾ ಆಯುಕ್ತರು(ಗೈ) ಶ್ರೀ ಆರ್.ಹೆಚ್. ಸಾಗರ್, ಅಧ್ಯಕ್ಷರು, ಸ್ಥಳೀಯ ಸಂಸ್ಥೆ, ರಾಯಚೂರು, ಶ್ರೀ ಎಸ್. ಶೇಖರ್ ಕಾರ್ಯದರ್ಶಿಗಳು, ಸ್ಥಳೀಯ ಸಂಸ್ಥೆ, ರಾಯಚೂರು, ಶ್ರೀಮತಿ ವಿಜಯಲಕ್ಷ್ಮಿ, ಡಿ.ಟಿ.ಸಿ., (ಗೈಡ್), ಶ್ರೀ ಕುಮಾರ ಅಂಬಣ್ಣ, ಸ್ಕೌಟ್ಸ್-ಗೈಡ್ಸ್ ಸ್ವಯಂ ಸೇವಕ ಉಪಸ್ಥಿತರಿದ್ದರು.

ಜಿಲ್ಲಾಡಳಿತ ವತಿಯಿಂದ ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳಲಾಗಿತ್ತು. ಸರಕಾರಿ ಪ್ರೌಢಶಾಲೆ ಜಹೀರಾಬಾದ್ ಗೈಡ್ ತಂಡವು ಮತ್ತು ಶ್ರೀಮತಿ ರಾಜಶ್ರೀ ಗೈಡ್ ಕ್ಯಾಪ್ಟನ್ ರವರು ಹಾಗೂ ಶ್ರೀ ಕುಮಾರ ಅಂಬಣ್ಣ ಸ್ಕೌಟ್ಸ್-ಗೈಡ್ಸ್ ಸ್ವಯಂ ಸೇವಕರು ಭಾಗವಹಿಸಿದ್ದರು.

* ಅಕ್ಟೋಬರ್ 5 ರಂದು ಸ್ಥಳೀಯ ಸಂಸ್ಥೆ ಲಿಂಗಸಗೂರು "ಕೃಷಿಯೆಡೆಗೆ ಸ್ಕೌಟ್-ಗೈಡ್‌ಗಳ ನಡಿಗೆ" ಕಾರ್ಯಕ್ರಮವನ್ನು ಶ್ರೀ ಮಲ್ಲನಗೌಡ ಅವರ ರೇಷ್ಮೆ ತೋಟದಲ್ಲಿ ಹಮ್ಮಿಕೊಳ್ಳಲಾಗಿತ್ತ. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಶ್ರೀ ಶರಣಪ್ಪ ಗೌಡ ಇವರು ವಹಿಸಿದ್ದರು. 60 ಸ್ಕೌಟ್ಸ್-ಗೈಡ್ಸ್‌ಗಳು, ಶ್ರೀ ಶಶಿಕಾಂತರಾವ್ ದೇಸಾಯಿ ತರಬೇತಿ ಸಲಹೆಗಾರರು. ಶ್ರೀ ಎಚ್.ಕೆ. ಲಿಂಗಯ್ಯ, ಶ್ರೀ ಜಗದೀಶ್ ಸ್ಕೌಟ್ ಮಾಸ್ಟರ್ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

* ಅಕ್ಟೋಬರ್ 5ರಂದು ಸ್ಥಳೀಯ ಸಂಸ್ಥೆ ಮಾನವಿ "ಕೃಷಿಯೆಡೆಗೆ ಸ್ಕೌಟ್ ಮತ್ತು ಗೈಡ್‌ಗಳ ನಡಿಗೆ" ಕಾರ್ಯಕ್ರಮವನ್ನು ನಗರದ ಹೊರವಲಯದಲ್ಲಿರುವ ತಾತನವರ ತೋಟದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಬಲರಾಮಕೃಷ್ಣ, ಸ್ಥಳೀಯ ಸಂಸ್ಥೆ, ಜಂಟಿ ಕಾರ್ಯದರ್ಶಿ ಶ್ರೀ ನರಸಿಂಹಮೂರ್ತಿ ದೇಸಾಯಿ ವಂದಿಸಿದರು. ನಗರ ವಿವಿಧ ಶಾಲೆಗಳಿಂದ 72 ಸ್ಕೌಟ್ಸ್-ಗೈಡ್ಸ್‌ಗಳು, ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ವಸಂತರಾವ್, ಶ್ರೀ ಸಿದ್ಧಲಿಂಗೇಶ್ ಕಬ್ ಮಾಸ್ಟರ್ ಶ್ರೀ ನರಸಪ್ಪ, ಗೈಡ್ ಕ್ಯಾಪ್ಟನ್ ಶ್ರೀಮತಿ ಫೈಮುದಾ ಬೇಗಂ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಶಿವಮೊಗ್ಗ

ಸೆಪ್ಟೆಂಬರ್ 19 ರಿಂದ 21ರ ವರೆಗೆ ಜಿಲ್ಲಾ ಮಟ್ಟದ ಬನ್ನಿಸ್ ತರಬೇತಿ ಶಿಬಿರವನ್ನು ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನ, ಬಿ.ಹೆಚ್. ರಸ್ತೆ ಶಿವಮೊಗ್ಗದಲ್ಲಿ ಹಮ್ಮಿಕೊಳ್ಳಲಾಗಿತ್ತು. ಸೆಪ್ಟೆಂಬರ್ 19ರಂದು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ ಶಿಬಿರವನ್ನು ಉದ್ಘಾಟಿಸಿ ಶಿಬಿರಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು. ಈ ಸಭಾ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಮೂರು ದಿನಗಳು ನಡೆದ ಈ ಶಿಬಿರಕ್ಕೆ ನಾಯಕಿಯಾಗಿ ಕು. ಎನ್.ಕೆ.ಛಾಯಾ ಕಾರ್ಯನಿರ್ವಹಿಸಿರುತ್ತಾರೆ. ಶಿವಮೊಗ್ಗ ನಗರದ ವಿವಿಧ ನರ್ಸರಿಗಳಲ್ಲಿ ಶಿಕ್ಷಕಿಯರಾಗಿ ಕಾರ್ಯನಿರ್ವಹಿಸುತ್ತಿರುವ ಸುಮಾರು 35 ಶಿಕ್ಷಕಿಯರು ತರಬೇತಿಯಲ್ಲಿ ಭಾಗವಹಿಸಿರುತ್ತಾರೆ.



* ಸೆಪ್ಟೆಂಬರ್ 21 ರಂದು ಶಿವಮೊಗ್ಗ ಮಕ್ಕಳ ಆಸ್ಪತ್ರೆಯ ಡಾ॥ ಯತೀಶ್ ಬಿ.ಎಲ್. ರವರು ಆಗಮಿಸಿ ಶಿಬಿರಾರ್ಥಿಗಳಿಗೆ ಮಕ್ಕಳ ಮಾನಸಿಕ ಮತ್ತು ದೈಹಿಕ ಬೆಳವಣಿಗೆ ಮತ್ತು ವಿಕಾಸ ಬಗ್ಗೆ ತಿಳಿಸಿದರು. ನಂತರ ಈ ಶಿಬಿರದ ಮುಕ್ತಾಯ ಸಮಾರಂಭವನ್ನು ಏರ್ಪಡಿಸಿದ್ದು ಮುಖ್ಯ ಅತಿಥಿಗಳಾಗಿ ಶಿವಮೊಗ್ಗ ಮಹಾನಗರ ಪಾಲಿಕೆಯ ಸದಸ್ಯರಾದ ಶ್ರೀಮತಿ ಸುರೇಖ ಮುರಳೀಧರ್ ಹಾಗೂ ಕಮಲ ನೆಹರು ಮಹಿಳಾ ಕಾಲೇಜಿನ ಪ್ರಾಂಶುಪಾಲರಾದ ಡಾ॥ ಪಾರ್ವತಮ್ಮ ನವರು ಆಗಮಿಸಿದ್ದರು.

* ಸೆಪ್ಟೆಂಬರ್ 21 ರಂದು ಸ್ಥಳೀಯ ಸಂಸ್ಥೆ, ಶಿವಮೊಗ್ಗ ಜಿಲ್ಲಾ ಸಂಸ್ಥೆ ವತಿಯಿಂದ ಅಂತರ್‌ರಾಷ್ಟ್ರೀಯ ಶಾಂತಿ ದಿನಾಚರಣೆಯನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರೀಯವರು ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದು ಕುಮಾರ್ ಸ್ವಾಗತವನ್ನು ಕೋರಿದರು. ಮುಖ್ಯ ಅತಿಥಿಗಳಾದ ಶಿವಮೊಗ್ಗ ಮಹಾನಗರ ಪಾಲಿಕೆಯ ಸದಸ್ಯರಾದ ಶ್ರೀಮತಿ ಸುರೇಖ ಮುರಳೀಧರ್ ಹಾಗೂ ಕಮಲ ನೆಹರು ಮಹಿಳಾ ಕಾಲೇಜಿನ ಪ್ರಾಂಶುಪಾಲರಾದ ಡಾ॥ ಪಾರ್ವತಮ್ಮ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಬದಲಾವಣೆ ಎಂಬುದು ನಮ್ಮಿಂದಲೇ ಪ್ರಾರಂಭವಾಗಬೇಕು. ಶಾಂತಿಯನ್ನು ಕೇವಲ ದಿನಾಚರಣೆಗೆ ಸೀಮಿತಗೊಳಿಸದೆ ನಮ್ಮ ನಿತ್ಯ ಜೀವನದಲ್ಲೂ ಅಳವಡಿಸಿಕೊಳ್ಳಬೇಕು ಎಂದು ಶಿವಮೊಗ್ಗ ಮಹಾನಗರ ಪಾಲಿಕೆ ಸದಸ್ಯರಾದ ಶ್ರೀಮತಿ ಸುರೇಖ ಮುರಳಿಧರ್ ತಿಳಿಸಿದರು. ಮತ್ತೊಬ್ಬ ಮುಖ್ಯ ಅತಿಥಿಗಳಾದ ಕಮಲ ನೆಹರು ಮಹಿಳಾ ಕಾಲೇಜು ಪ್ರಾಂಶುಪಾಲರಾದ ಡಾ॥ ಪಾರ್ವತಮ್ಮ "ಮಕ್ಕಳು ಪ್ರಾಚೀನ ಸಂಸ್ಕೃತಿ ಹಾಗೂ ಆಧುನಿಕ ಸಂಸ್ಕೃತಿಗಳಲ್ಲಿನ ಉತ್ತಮ ಗುಣಗಳನ್ನು ಅರಿತು ಅಳವಡಿಸಿಕೊಳ್ಳಬೇಕು. ಶಾಂತಿಯನ್ನು ಬೋಧಿಸುವುದು





ಬೇಡ. ಪಾಲಿಸಿದರೆ ಸಾಕು ಮತ್ತು ಉತ್ತಮ ಸಮಾಜ ನಿರ್ಮಾಣವಾಗುತ್ತದೆ" ಎಂದು ತಿಳಿಸಿದರು. ಈ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿಯವರು ಸತ್ಯ, ತ್ಯಾಗ ಮತ್ತು ಶಾಂತಿ ತತ್ವಗಳನ್ನು ಪಾಲಿಸಬೇಕು ಮೊದಲು ಮಾನವೀಯ ಮೌಲ್ಯಗಳನ್ನು ಹೊಂದಿರಬೇಕು ಎಂದು ತಿಳಿಸಿದರು.

ಈ ಸಮಾರಂಭದಲ್ಲಿ ನರ್ಸರಿ ಮಕ್ಕಳಿಗೆ ಕಲಿಸುವ 35 ಶಿಕ್ಷಕಿಯರು, ಜಿಲ್ಲೆಯ ವಿವಿಧ ಶಾಲಾ ಮತ್ತು ಕಾಲೇಜಿನ 220 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಭಾಗವಹಿಸದ್ದರು. ವಂದನಾರ್ಪಣೆಯನ್ನು ಜಿಲ್ಲಾ ಆಯುಕ್ತರು(ಗೈ) ಶ್ರೀಮತಿ ಶಕುಂತಲ ಚಂದ್ರಶೇಖರ್ ಹಾಗೂ ನಿರೂಪಣೆಯನ್ನು ಶ್ರೀಮತಿ ಭಾರತಿ ಡಾಯಸ, ಎ.ಎಸ್.ಓ.ಸಿ. ನೆರವೇರಿಸಿದರು. ಬನ್ನಿ ನಾಯಕಿ ಶ್ರೀಮತಿ ಎನ್.ಕೆ. ಛಾಯಾ, ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ವೈ.ಆರ್. ವೀರೇಶಪ್ಪ, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಲಕ್ಷ್ಮಿ, ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಜಿ. ವಿಜಯ್ ಕುಮಾರ್, ಶ್ರೀಮತಿ ಸಿ.ಎಸ್. ಕಾತ್ಯಾಯಿನಿ ಡಿ.ಟಿ.ಸಿ(ಜಿ), ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಡಿ.ಎನ್. ನೂರ್ ಅಹಮದ್ ಉಪಸ್ಥಿತರಿದ್ದರು.

## ಶಿರಸಿ

ಆಗಸ್ಟ್ 15 ಸ್ವಾತಂತ್ರ್ಯೋತ್ಸವ ಅಂಗವಾಗಿ ಶಿರಸಿ ಜಿಲ್ಲಾ ಸಂಸ್ಥೆ ಕಾರ್ಯಕ್ರಮವನ್ನು ಆಯೋಜಿಸಿತ್ತು. ಶಿರಸಿಯ ಜೈಲಿನ 28 ಖೈದಿಗಳಿಗೆ ಸಿಹಿ ವಿತರಿಸಿ ಮನಪರಿವರ್ತನೆಯಾಗುವ ರೀತಿಯಲ್ಲಿ ಶ್ರೀ ವಿ. ಎಚ್. ಭಟ್ಕಳ್ ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀ ವೀರೇಶ್ ಮಾದರ, ಜಿಲ್ಲಾ ಸಂಘಟಕರು ಶ್ರೀ ಜ್ಞಾನೇಶ್ ವರ್ಣೇಕರ್, ಸ್ಕೌಟ್ಸ್-ಗೈಡ್ಸ್ ಸ್ವಯಂ ಸೇವಕರು ತಿಳುವಳಿಕೆ ನೀಡಿದರು.

ಆರಂಭದಲ್ಲಿ ಶ್ರೀ ವೆಂಕಟೇಶ ಪಟಗಾರ ಇವರು ಸ್ವಾಗತಿಸಿದರು. ಶಿರಸಿ ಶೈಕ್ಷಣಿಕ ಜಿಲ್ಲೆಯ ಆಯುಕ್ತ ಶ್ರೀ ವಿ.ಎಚ್. ಭಟ್ಕಳ್ ಮಾತನಾಡಿ ತಿಳಿದೋ ತಿಳಿಯದೆಯೋ ತಾವು ತಪ್ಪನ್ನು ಮಾಡಿರಬಹುದು. ಅದನ್ನು ಮುಂದುವರೆಸಿಕೊಂಡು ಬರಬಾರದು ಎಂದರು. ಶ್ರೀ ಅಜಿತ್ ಭಜಂತ್ರಿ, ಜೈಲರ್ ವಂದನೆಗಳನ್ನು ಸಲ್ಲಿಸಿದರು. ಈ ಕಾರ್ಯಕ್ರಮದಲ್ಲಿ ಶ್ರೀ ವಿರೇಶ್ ಮಾದರ, ಜಿಲ್ಲಾ ಸಂಘಟಕರು ಶ್ರೀ ಜ್ಞಾನೇಶ್ ವರ್ಣೇಕರ್, ಸ್ಕೌಟ್ಸ್-ಗೈಡ್ಸ್‌ಗಳು ಶ್ರೀ ಪರಮೇಶ್ ಹರಿಜನ ಹವಲ್ದಾರ ಶ್ರೀ ಶಿವಾನಂದ ಇವರುಗಳು ಉಪಸ್ಥಿತರಿದ್ದರು.



## ಅಭಿನಂದನೆಗಳು



**ಶ್ರೀ ಬಾಹುದ್ದೀನ್ ಸಾಹೇಬ್**

ಸ್ಕೌಟ್ ಮಾಸ್ಟರ್, ಜಿ.ಎಲ್.ಪಿ.ಎಸ್. ಹೆರೆಜೇನಹಳ್ಳಿ ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇವರು **"ವಿಶೇಷ ಶಿಕ್ಷಕ ರಾಜ್ಯ ಪ್ರಶಸ್ತಿ"**ಯನ್ನು ಪಡೆದಿರುತ್ತಾರೆ. ಸ್ಕೌಟ್ ವಿಭಾಗದಲ್ಲಿ ಅಡ್ವಾನ್ಸ್ ತರಬೇತಿಯನ್ನು ಪಡೆದು 1995ರಿಂದ ಸ್ಕೌಟ್‌ಮಾಸ್ಟರ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರಿಗೆ ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಸಂಸ್ಥೆಯಿಂದ ಅಭಿನಂದನೆಗಳು.



– ರಾಜ್ಯ ಕಾರ್ಯದರ್ಶಿ

* ಆಗಸ್ಟ್ 22ರಂದು ಕೆನರಾ ಬ್ಯಾಂಕ್ ದೇಶಪಾಂಡೆ ಆರ್-ಸೆಟ್‌ನ ಭವನದಲ್ಲಿ ಗೀತಗಾಯನ ಸ್ಪರ್ಧೆ ನಡೆಯಿತು. ಶ್ರೀ ವಿದ್ಯಾಧರ ಗುಳಗುಳಿ, ಮಾನ್ಯ ತಹಶೀಲ್ದಾರರು ಹಾಗೂ ಅಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್ ಹಳಿಯಾಳ, ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದರು. ವಿದ್ಯಾರ್ಥಿಗಳು ತಮ್ಮ ಜೀವನದಲ್ಲಿ ನಮ್ಮ ನಾಡು ನಮ್ಮ ದೇಶಕ್ಕೆ ಅಪಾರ ಪ್ರಮಾಣದ ಗೌರವವನ್ನು ನೀಡುವುದರ ಜೊತೆಗೆ ದೇಶಕ್ಕೆ ಏನಾದರೂ ಮಾಡಿ ತೋರುವ ಛಲವನ್ನು ಹೊಂದಬೇಕು ಎಂದರು.



ಈ ಸಂದರ್ಭದಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷ ಶ್ರೀ ಸತೀಶ ನಾಯ್ಕ, ವಿ.ವಿ.ಡಿ.ಇ.ಎಸ್. ಶಾಲೆಯ ಶ್ರೀಮತಿ ಸಂಗೀತಾ ಮಿಲೆಗರಿ, ಶ್ರೀಮತಿ ಮಂಗಲಾ ಕಶೀಲಕರ್ ಶ್ರೀಮತಿ ಲೇನೆಟ್ ಶರಾವೋ, ಜಿಲ್ಲಾ ಸಂಘಟಕರಾದ ಶ್ರೀ ವಿರೇಶ್ ಮಾದರ್, ಸ್ಕೌಟ್-ಗೈಡ್ ಸ್ವಯಂಸೇವಕರಾದ ಶ್ರೀ ಜ್ಞಾನೇಶ್ ವರ್ಣೇಕರ್, ಶ್ರೀ ರಮೇಶ್ ಕುರಿ ತಾಲೂಕ ಕಾರ್ಯದರ್ಶಿ ಹಾಗೂ ಶ್ರೀಮತಿ ಪ್ರತಿಮಾ ನಾಯ್ಕ, ಗೈಡ್ಸ್ ಕ್ಯಾಪ್ಟನ್ ಉಪಸ್ಥಿತರಿದ್ದರು.

* ಆಗಸ್ಟ್ 26 ರಂದು ಸ್ಥಳೀಯ ಸಂಸ್ಥೆ ಶಿರಸಿ ವತಿಯಿಂದ ದೇಶಭಕ್ತಿ ಗೀತಗಾಯನ ಸ್ಪರ್ಧೆ ಜೆ.ಎಂ.ಜೆ. ಶಿಕ್ಷಣ ಸಂಸ್ಥೆಯ ಸಭಾಭವನದಲ್ಲಿ ನಡೆಯಿತು. ಸಿಸ್ಟರ್ ಸಂತೋಷಿ ಮೇರಿಯವರು ಕಾರ್ಯಕ್ರಮ ಉದ್ಘಾಟಿಸಿದರು. ಜಿಲ್ಲಾ ಆಯುಕ್ತರಾದ ಶ್ರೀ ವಿ.ಎಚ್. ಭಟ್ಕಳ್ ರವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ದೈಹಿಕ ಶಿಕ್ಷಣ ಪರಿವೀಕ್ಷಕರು ಹಾಗೂ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಸಂತ ಭಂಡಾರಿಯವರು ಹಾಗೂ ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಸುರೇಶ್ ಪಟಗಾರ್ ಅತಿಥಿಗಳಾಗಿ ಆಗಮಿಸಿದ್ದರು. ವೇದಿಕೆಯಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಮಾರುತಿ ಉಪ್ಪಾರ್, ಜಿಲ್ಲಾ ಸಹಕಾರ್ಯದರ್ಶಿಗಳಾದ ಶ್ರೀ ಕಿರಣ್ ಫರ್ನಾಂಡೀಸ್, ಜಿಲ್ಲಾ ಸಂಘಟಕರಾದ ಶ್ರೀ ವಿರೇಶ್ ಮಾದರ್, ಸ್ಕೌಟ್-ಗೈಡ್ ಸ್ವಯಂಸೇವಕರಾದ ಶ್ರೀ ಜ್ಞಾನೇಶ್ ವರ್ಣೇಕರ್ ಹಾಗೂ ನಿರ್ಣಾಯಕರಾದ ಶ್ರೀ ಉಮಾಕಾಂತ ಹೆಗಡೆ, ಶ್ರೀಮತಿ ಮಮತಾ ಹೆಗಡೆ, ಶ್ರೀಮತಿ ರಾಜೇಶ್ವರಿ ಹೆಗಡೆ ಉಪಸ್ಥಿತರಿದ್ದರು.

ಸ್ಕೌಟ್ ಮಾಸ್ಟರ್ ಶ್ರೀ ಗಂಗಾಧರ್ ಪಟಗಾರ್ ಸ್ವಾಗತಿಸಿದರು. ಶ್ರೀ ಕಿರಣ್ ಫರ್ನಾಂಡೀಸ್ ವಂದಿಸಿದರು. ತಾಲೂಕಾ ಕಾರ್ಯದರ್ಶಿಗಳಾದ ಶ್ರೀ ಎನ್. ಎಸ್ ಭಾಗವತ್ ಕಾರ್ಯಕ್ರಮ ನಿರೂಪಣೆ ಮಾಡಿದರು.

* ಆಗಸ್ಟ್ 26 ರಂದು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಯಡಳ್ಳಿ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ತಮ್ಮ ಶಾಲೆಯ ಗದ್ದೆಯಲ್ಲಿ ಭತ್ತದ ನಾಟಿಮಾಡಿದರು. ಶಾಲೆಯ ಮುಖ್ಯಾಧ್ಯಾಪಕ ಶ್ರೀಮತಿ ಯಮುನಾ ಪೈ, ಲೇಡಿ ಸ್ಕೌಟ್ ಮಾಸ್ಟರ್, ಶ್ರೀಮತಿ ಭಟ್, ಶ್ರೀ ಜಿ.ಎಸ್. ಭಟ್, ಶ್ರೀಮತಿ ಬಿ. ಆರ್. ಲತಾ, ಶ್ರೀ ವಿರೇಶ್ ಮಾದರ್ ಜಿಲ್ಲಾ ಸಂಘಟಕರು, ಶ್ರೀ ಜ್ಞಾನೇಶ್ ವರ್ಣೇಕರ್, ಸ್ಕೌಟ್-ಗೈಡ್‌ಗಳು ಉಪಸ್ಥಿತರಿದ್ದರು.

* ಆಗಸ್ಟ್ 10 ರಿಂದ 12 ರ ವರೆಗೆ ಸರಕಾರಿ ಪ್ರಥಮ ದರ್ಜೆ ಕಾಲೇಜು, ಮುಂಡಗೋಡಿನ ರೋವರ್ಸ್ ಮತ್ತು ರೇಂಜರ್ಸ್‌ಗಳು ತಾಲೂಕು ಪಂಚಾಯತ್ ಸಭಾಭವನದಲ್ಲಿ ತೆರೆಯಲಾಗಿದ್ದ ನಿರಾಶ್ರಿತರ ಕೇಂದ್ರದಲ್ಲಿ ಸೇವೆ ಸಲ್ಲಿಸಿದರು. ಶ್ರೀ ರಮೇಶ್ ಚವ್ಹಾನ್, ಕಾರ್ಯದರ್ಶಿಗಳು, ಸ್ಥಳೀಯ ಸಂಸ್ಥೆ ಮುಂಡಗೋಡ, ಶ್ರೀ ವಿರೇಶ್ ಮಾದರ್, ಜಿಲ್ಲಾ ಸಂಘಟಕರು, ಶ್ರೀ ಜ್ಞಾನೇಶ್ ವರ್ಣೇಕರ್, ಸ್ಕೌಟ್-ಗೈಡ್‌ಗಳು ಸೇವಾ ಕಾರ್ಯದಲ್ಲಿ ಭಾಗವಹಿಸಿದ್ದರು.

* ಆಗಸ್ಟ್ 15 ರಂದು ಸರಕಾರಿ ಪ್ರಥಮ ದರ್ಜೆ ಕಾಲೇಜು, ಯಲ್ಲಾಪುರದ ರೋವರ್ಸ್-ರೇಂಜರ್ಸ್‌ಗಳು ಪ್ರವಾಹದಿಂದ ಅನಾಹುತಕ್ಕೀಡಾಗಿದ್ದ ಗುಳ್ಳಾಪುರ ಗ್ರಾಮಕ್ಕೆ ಬೇಟಿನೀಡಿ ಅಲ್ಲಿನ ಜನರಿಗೆ ಸಾಂಕ್ರಾಮಿಕ ರೋಗಗಳು ಮತ್ತು ಅವುಗಳ ತಡೆಯ ಬಗ್ಗೆ ಶ್ರೀ ದತ್ತಾತ್ರೇಯ ತಾಪಸ್ ರೋವರ್ ಸ್ಕೌಟ್ ಲೀಡರ್ ರವರ ಮಾರ್ಗದರ್ಶನದಲ್ಲಿ ಮಾಹಿತಿ ನೀಡಲಾಯಿತು.

* ಆಗಸ್ಟ್ 13 ರಂದು ಸರಕಾರಿ ಪ್ರಥಮ ದರ್ಜೆ ಕಾಲೇಜು ಮುಂಡಗೋಡಿನ ರೋವರ್-ರೇಂಜರ್ಸ್‌ಗಳು ಮುಂಡಗೋಡ ನಗರ ವ್ಯಾಪ್ತಿಯಲ್ಲಿ ಸಂಚರಿಸಿ ದಾನಿಗಳಿಂದ ಹಣವನ್ನು ಸಂಗ್ರಹಿಸಿದರು. ಈ ಸಂದರ್ಭದಲ್ಲಿ ಶ್ರೀ ರಮೇಶ್ ಚವ್ಹಾನ್, ಕಾರ್ಯದರ್ಶಿಗಳು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ಮುಂಡಗೋಡ, ಶ್ರೀ ವಿರೇಶ್ ಮಾದರ್ ಜಿಲ್ಲಾ ಸಂಘಟಕರು, ಶ್ರೀ ಜ್ಞಾನೇಶ್ ವರ್ಣೇಕರ್ ಸ್ಕೌಟ್-ಗೈಡ್ ಸ್ವಯಂ ಸೇವಕರು ಸೇವಾ ಕಾರ್ಯದಲ್ಲಿ ಭಾಗವಹಿಸಿದ್ದರು.

* ಆಗಸ್ಟ್ 27ರಂದು ಮುಂಡಗೋಡ ಸ್ಥಳೀಯ ಸಂಸ್ಥೆಯು ತಾಲೂಕ ಮಟ್ಟದ ಗೀತಗಾಯನ ಸ್ಪರ್ಧೆಯನ್ನು ಆಯೋಜಿಸಿತ್ತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಶ್ರೀಧರ್ ಮುಂದಲಮನಿ, ಮಾನ್ಯ ತಹಶೀಲ್ದಾರರು ಹಾಗೂ ಅಧ್ಯಕ್ಷರು ಮುಂಡಗೋಡ ಸ್ಥಳೀಯ ಸಂಸ್ಥೆ ವಹಿಸಿಕೊಂಡಿದ್ದರು. ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಪ್ರವಾಹ ಸಂದರ್ಭದಲ್ಲಿ ಮಾಡಿದ ಸೇವೆಯನ್ನು ನೆನೆದು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ನಿವೃತ್ತ ದೈಹಿಕ ಪರಿವೀಕ್ಷಕರಾದ ಶ್ರೀ ಎನ್.ಆರ್. ಕಳ್ಳಿಮನಿಯವರನ್ನು ತಾಲೂಕ ಸಂಸ್ಥೆಯಿಂದ ಸನ್ಮಾನಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಸಂಘಟಕರಾದ ಶ್ರೀ ವಿರೇಶ್ ಮಾದರ್, ಶ್ರೀ ರಮೇಶ್ ಚವ್ಹಾನ್, ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ, ಮುಂಡಗೋಡ ಉಪಸ್ಥಿತರಿದ್ದರು.

* ಆಗಸ್ಟ್ 28 ರಂದು ಸ್ಥಳೀಯ ಸಂಸ್ಥೆ ಮುಂಡಗೋಡ ಹಾಗೂ ಸರಕಾರಿ ಪ್ರಥಮ ದರ್ಜೆ ಕಾಲೇಜು ಮುಂಡಗೋಡ ಸಹಯೋಗದಲ್ಲಿ ಮುಂಡಗೋಡ ತಾಲೂಕಿನ ಪ್ರವಾಹ ಪೀಡಿತ ಪ್ರದೇಶಗಳಿಗೆ ಬೇಟಿ ನೀಡಿ ರೋವರ್ಸ್-ರೇಂಜರ್ಸ್‌ಗಳು ದಾನಿಗಳಿಂದ ಸಂಗ್ರಹಿಸಿದ ಹಣದಲ್ಲಿ ಸಂತ್ರಸ್ತರಿಗೆ ಮನೆ ಬಳಕೆಗೆ ಬೇಕಾಗುವ ಸಾಮಾಗ್ರಿಗಳನ್ನು ವಿತರಿಸಲಾಯಿತು. ಈ ಸಂದರ್ಭದಲ್ಲಿ ಸರಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಇಂದ್ರಾಣಿ ಬಾಗಲಕೋಟಿ, ಶ್ರೀ ರಮೇಶ್ ಚವ್ಹಾನ್, ಕಾರ್ಯದರ್ಶಿಗಳು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಮುಂಡಗೋಡ, ರೋವರ್ ಸ್ಕೌಟ್ ಲೀಡರ್ ಶ್ರೀ ನಿಸರಖಾನ್, ರೇಂಜರ್ ಲೀಡರ್ ಶ್ರೀಮತಿ ಮಧುಶ್ರೀ ಕೆ.ಎಸ್. ಜಿಲ್ಲಾ ಸಂಘಟಕರಾದ ಶ್ರೀ ವಿರೇಶ್ ಮಾದರ್ ಉಪಸ್ಥಿತರಿದ್ದರು.



## ತುಮಕೂರು

ಸೆಪ್ಟೆಂಬರ್ 27 ರಂದು ಜಿಲ್ಲಾ ಮಟ್ಟದ ದೇಶಭಕ್ತಿ ಗೀತಗಾಯನ ಸ್ಪರ್ಧೆಯನ್ನು ಸರ್ಕಾರಿ ಪದವಿಪೂರ್ವ ಕಾಲೇಜು ತುಮಕೂರಿನಲ್ಲಿ ಹಮ್ಮಿಕೊಳ್ಳಲಾಗಿತ್ತು.

ಶ್ರೀಮತಿ ಸುಭಾಷಿಣಿ ಆರ್. ಕುಮಾರ್, ಜಿಲ್ಲಾ ಆಯುಕ್ತರು (ಗೈ) ಶ್ರೀ ಸುರೇಂದ್ರ ಷಾ, ಜಿಲ್ಲಾ ಕಾರ್ಯದರ್ಶಿಗಳು. ಶ್ರೀ ಟಿ.ಎಸ್. ಅಂಜನಪ್ಪ, ಸಹ ಕಾರ್ಯದರ್ಶಿ ನಿವೃತ್ತ ಡಿ.ಡಿ.ಪಿ.ಐ., ಶ್ರೀ ಗಂಗಯ್ಯ ಎ.ಡಿ.ಸಿ., ಶ್ರೀ ಬೆಳ್ಳಿ ಲೋಕೇಶ್, ತುಮಕೂರು ಸ್ಥಳೀಯ ಸಂಸ್ಥೆ ಅಧ್ಯಕ್ಷರು ಶ್ರೀ ಚೇತನ್‌ಮೂರ್ತಿ ಎ.ಡಿ.ಸಿ., ಶ್ರೀ ಅಖಿಲೇಶ್, ಜಿಲ್ಲಾ ಸಂಘಟಕ ಹಾಗೂ ಸ್ಕೌಟ್ ಮಾಸ್ಟರ್-ಗೈಡ್ ಕ್ಯಾಪ್ಟನ್‌ಗಳು ಉಪಸ್ಥಿತರಿದ್ದರು.



## ವಿಜಯಪುರ

ಸೆಪೆಂಬರ್ 25 ರಂದು ಜಿಲ್ಲೆಯ ಸರಕಾರಿ ಬಾಲಕಿಯರ ಹಿರಿಯ ಪ್ರಾಥಮಿಕ ಶಾಲೆ, ತೊರವಿ ಇಲ್ಲಿ ರಾಷ್ಟ್ರೀಯ ಜಂತುಹುಳು ನಿವಾರಣಾ ದಿನವನ್ನು ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಶಿವಪ್ಪ ತೊರವಿ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಸಹಜಾನಂದ ದಂಧರಗಿ ಜಿಲ್ಲಾ ಖಜಾಂಚಿಗಳು, ಶ್ರೀಮತಿ ವಿದ್ಯಾವತಿ ಅಂಕಲಗಿ, ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀಮತಿ ಎಮ್. ವಾಯ್.



ಧನಗೊಂಡ್, ಶ್ರೀಮತಿ ಎಸ್.ಕೆ. ಛಲವಾದಿ, ಶ್ರೀಮತಿ ನಂದಾ ತಿಕೋಟಿ, ಶ್ರೀ ಜಿ.ವಿ. ಕುಲಕರ್ಣಿ, ಗೈಡ್ ಕ್ಯಾಪ್ಟನ್ ಕು. ಅಶ್ವಿನಿ ಚೋರಗಿ, ಎಸ್.ಜಿ.ವಿ. ರಾಜಶೇಖರ ಖೇಡಗಿ ಮತ್ತು ಶಾಲೆಯ ಎಲ್ಲ ಶಿಕ್ಷಕವೃಂದ ಉಪಸ್ಥಿತರಿದ್ದರು.

ಕಾರ್ಯಕ್ರಮವನ್ನು ಗೈಡ್ಸ್‌ಗಳು ತಮ್ಮ ತಂದೆ-ತಾಯಿಯ ಪಾದಪೂಜೆ ಮಾಡುವುದರ ಮೂಲಕ ಉದ್ಘಾಟಿಸಿದರು. ಮಕ್ಕಳಿಗೆ ಜಂತು ಹುಳುವಿನ ಮಾತ್ರೆಯನ್ನು ವಿತರಿಸಲಾಯಿತು.

* ಸೆಪ್ಟೆಂಬರ್ 21 ಮತ್ತು 22 ರಂದು ಸ್ಥಳೀಯ ಸಂಸ್ಥೆ, ವಿಜಯಪುರ ನಗರ ಮತ್ತು ಜಿಲ್ಲಾ ಸಂಸ್ಥೆ ವಿಜಯಪುರ ಇವರ ಸಹಯೋಗದೊಂದಿಗೆ ವಾಸಂತಿಬಾಯಿ ಜಿಗಜಿಣಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ ಬುರುಣಾಪೂರ ತಾಲ್ಲೂಕು, ಜಿಲ್ಲಾ ವಿಜಯಪುರ ಇಲ್ಲಿ ನಗರ ವಲಯದ ಸ್ಕೌಟ್ಸ್-ಗೈಡ್ಸ್‌ಗಳಿಗೆ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರವನ್ನು ನಡೆಸಲಾಯಿತು. ಸ್ಕೌಟ್ಸ್ ವಿಭಾಗದ ನಾಯಕರಾಗಿ ಶ್ರೀ ಎಸ್.ಎಸ್. ಪಾಟೀಲ, ಗೈಡ್ಸ್ ವಿಭಾಗದ ನಾಯಕಿಯಾಗಿ ಶ್ರೀಮತಿ ಡಿ.ಎಲ್. ಪಿಂಜಾರ ಕಾರ್ಯನಿರ್ವಹಿಸಿದರು.

ಶಿಬಿರವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ ಎಂ ಸಕ್ರೀ ಅವರ ಅಧ್ಯಕ್ಷತೆಯಲ್ಲಿ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರಾದ ಶ್ರೀ ಆರ್.ಬಿ.ಉಪಾಸೆ ಸಸಿಗೆ ನೀರೆರೆಯುವುದರ ಮೂಲಕ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಎ.ಎಸ್.ಓ.ಸಿ., ಶ್ರೀ ನಾಗೇಶ ಶಿವಪುರ, ಶ್ರೀ ಚಂದ್ರಶೇಖರ ಮುಳವಾಡ, ಮುಖ್ಯೋಪಾಧ್ಯಾಯ ಶ್ರೀ ಮಲ್ಲಿಕಾರ್ಜುನ, ಪ್ರೌಢಶಾಲೆ ವಿಜಯಪುರ ಉಪಸ್ಥಿತರಿದ್ದರು. ವಿಜಯಪುರ ನಗರ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಅಶೋಕ ಎಂ. ಚಳ್ಳಗಿ ಇವರು ಎಲ್ಲರನ್ನು ಸ್ವಾಗತಿಸಿದರು. ಸ್ಕೌಟ್ಸ್ ಮಾಸ್ಟರ್ ಶ್ರೀ ಪ್ರಕಾಶ್ ಪೂಜಾರ ಇವರು ಎಲ್ಲರಿಗೂ ವಂದಿಸಿದರು.

* ಅಕ್ಟೋಬರ್ 4ರಂದು ಸರಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ವಂದಾಲ, ತಾ॥ ನಿಡಗುಂದಿ, ಇಲ್ಲಿ ವನಭೋಜನ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳಿಂದ ಸಮುದಾಯ ಸೇವಾ ಶಿಬಿರವನ್ನು ಏರ್ಪಡಿಸಲಾಯಿತು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎಸ್.ಬಿ. ಭಜಂತ್ರಿಯವರ ನೇತೃತ್ವದಲ್ಲಿ ಮಕ್ಕಳು ಅತ್ಯಂತ ಉತ್ಸುಕತೆಯಿಂದ ಸ್ವಚ್ಛತೆಯುಲ್ಲಿ ಪಾಲ್ಗೊಂಡರು. ಈ ಸಂದರ್ಭದಲ್ಲಿ ಮಕ್ಕಳ ಕಾರ್ಯವನ್ನು ಗಮನಿಸಿದ ಗ್ರಾಮಸ್ಥರು ಮಕ್ಕಳಿಗೆ ಶುಭ ಹಾರೈಸಿದರು. ಹಾಗೇ ಮಕ್ಕಳಿಂದ ಪ್ಲಾಸ್ಟಿಕ್ ಮುಕ್ತ ಗ್ರಾಮವನ್ನು ನಿರ್ಮಿಸಲು ಪಣತೊಡಲಾಯಿತು. ಶಾಲೆಯ ಶಿಕ್ಷಕ ವೃಂದವು ಮಕ್ಕಳ ಸಮಾಜ ಮುಖಿ ಸೇವೆಗೆ ಮೆಚ್ಚುಗೆ ವ್ಯಕ್ತಪಡಿಸಿದರು.



ಇದೇ ಸಂದರ್ಭದಲ್ಲಿ ಮಾತನಾಡಿದ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎಸ್.ಬಿ. ಭಜಂತ್ರಿಯವರು ಪ್ಲಾಸ್ಟಿಕ್ ಮುಕ್ತ ಭಾರತಕ್ಕಾಗಿ ನಾವೆಲ್ಲರೂ ಶ್ರಮಿಸೋಣ ಎಂದು ಮಕ್ಕಳಿಗೆ ಸ್ಫೂರ್ತಿ ತುಂಬಿದರು.

## ಯಾದಗಿರಿ

ಸೆಪ್ಟೆಂಬರ್ 18 ರಂದು ವಿಶ್ವ ಪರಿಸರ ದಿನ ಅಂಗವಾಗಿ ಜನಜಾಗೃತಿ ಕಾರ್ಯಕ್ರಮವನ್ನು ಪ್ರಾದೇಶಿಕ ಅರಣ್ಯ ವಿಭಾಗ, ಯಾದಗಿರಿ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಯಾದಗಿರಿ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಶ್ರೀ ಎಂ.ಎಲ್. ಭಾವಿಕಟ್ಟಿ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಪ್ರಾದೇಶಿಕ ಅರಣ್ಯ ಉಪ ವಿಭಾಗ ಯಾದಗಿರಿ ಹಾಗೂ ಶ್ರೀ ಬಸವರಾಜ ಎಸ್. ಡಾಂಗೆ, ಪ್ರಾದೇಶಿಕ ಅರಣ್ಯ ವಲಯ, ಯಾದಗಿರಿ ರವರು ಹಸಿರು ನಿಶಾನೆ ತೋರಿಸುವ ಮೂಲಕ ಜಾಥಾಕ್ಕೆ ಚಾಲನೆ ನೀಡಿದರು.

ಈ ಜಾಥಾದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಮೊರಾರ್ಜಿ ದೇಸಾಯಿ ವಸತಿ ಶಾಲೆಯ ಮಕ್ಕಳು ಸೇರಿ ಪರಿಸರ ಸಂರಕ್ಷಣೆಯ ಅರಿವು ಮೂಡಿಸುವ ಘೋಷಣೆಗಳನ್ನು ಕೂಗುತ್ತಾ ಸಾರ್ವಜನಿಕರ ಗಮನ ಸೆಳೆದರು. ಈ ಸಂದರ್ಭದಲ್ಲಿ ಜಿಲ್ಲಾ ಆಯುಕ್ತರಾದ ಶ್ರೀ ಸಿ.ಎಂ. ಪಟ್ಟೇದಾರ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ರಾಘವೇಂದ್ರ, ಜಿಲ್ಲಾ ಖಜಾಂಚಿ ಶ್ರೀ ವಿರೇಂದ್ರ ಪಾಟೀಲ್, ತಾಲೂಕ ಕಾರ್ಯದರ್ಶಿ





ಶ್ರೀ ಬಸರೆಡ್ಡಿ ಮಾಲೀಪಾಟೀಲ್, ಜಿಲ್ಲಾ ಸಂಘಟಕಿಯರಾದ ಶ್ರೀಮತಿ ನಾಗರತ್ನ ಪಾಟೀಲ್, ಮುರಾರ್ಜಿ ದೇಸಾಯಿ ಶಾಲೆಯ ಶಿಕ್ಷಕರಾದ ಶ್ರೀ ಸಿದ್ದಣ್ಣಗೌಡ ಬಿರಾದಾರ, ಸ್ಕೌಟ್ ಮಾಸ್ಟರ್ ಶ್ರೀ ರಾಘವೇಂದ್ರ ಹಾಜರಿದ್ದರು.

* ಅಕ್ಟೋಬರ್ 2 ರಂದು ಮಹಾತ್ಮಾ ಗಾಂಧೀಜಿ ಹಾಗೂ ಲಾಲಬಹದ್ದೂರ ಶಾಸ್ತ್ರೀಜೀ ಯವರ ಜನ್ಮದಿನ ಪ್ರಯುಕ್ತ ನಗರದಲ್ಲಿ ಸ್ವದೇಶಿ ಬಳಸಿ, ದೇಶ ಉಳಿಸಿ, ಜಾಥಾ, ಪ್ಲಾಸ್ಟಿಕ್ ಬಳಕೆ ನಿಷೇದಿಸಿ, ಪಟಾಕಿ (ಮದ್ದು) ಮುಕ್ತ ದೀಪಾವಳಿ ಆಚರಿಸಿ ಎನ್ನುವಂತಹ ಘೋಷಣೆ ಜಾಗೃತಿ ಜಾಥಾವನ್ನು ಬಾಲಕರ ಪ್ರೌಢಶಾಲೆ ಶಹಾಪುರದಿಂದ ಗಾಂಧಿ ಚೌಕದ ವರೆಗೆ ಮಾಡಲಾಯಿತು. ಅಲ್ಲದೇ ಹೊಸದಾಗಿ ಗಾಂಧಿ ಪುತ್ಥಳಿ ಉದ್ಘಾಟನಾ ಕಾರ್ಯಕ್ರಮದಲ್ಲಿ ಭಾಗವಹಿಸಲಾಯಿತು. ಈ ಕಾರ್ಯಕ್ರಮದಲ್ಲಿ ಸರಕಾರಿ ಪದವಿ ಕಾಲೇಜಿನ ರೋವರ್ – ರೇಂಜರ್‌ಗಳು ತಾಲೂಕ ಕಾರ್ಯದರ್ಶಿ ಶ್ರೀ ಬಸವರಾಜ ಗೋಗಿ, ತಾಲ್ಲೂಕ ಅದ್ಯಕ್ಷರಾದ ಶ್ರೀ ಶಿವರಾಜ ದೇಶಮುಖ, ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ಸುಧಾಕರ ಗುಡಿ ಭಾಗವಹಿಸಿದ್ದರು.

# ಶ್ರದ್ಧಾಂಜಲಿ



ಶ್ರೀಮತಿ ಲಕ್ಷ್ಮಿಶಾಸ್ತ್ರಿ, ಮಾಜಿ ಜಿಲ್ಲಾ ಗೈಡ್ ಆಯುಕ್ತರು, ಶಿವಮೊಗ್ಗ ಜಿಲ್ಲಾ ಸಂಸ್ಥೆ ಇವರು ದಿನಾಂಕ 30–9–2019 ರಂದು ಶಿವಮೊಗ್ಗದಲ್ಲಿ ನಿಧನ ಹೊಂದಿದರು. ಇವರಿಗೆ 90 ವರ್ಷ ವಯಸ್ಸಾಗಿತ್ತು. ಇವರು 1974 ರಿಂದ 1990ರ ವರೆಗೆ ಶಿವಮೊಗ್ಗ ಜಿಲ್ಲಾ ಗೈಡ್ ಆಯುಕ್ತರಾಗಿ ಕಾರ್ಯನಿರ್ವಹಿಸಿದರು.

ಇವರು ದಿವಂಗತ ಶ್ರೀ ಟಿ.ವಿ. ವೆಂಕಟರಾಮ ಶಾಸ್ತ್ರಿ, ಮಾಜಿ ಜಿಲ್ಲಾ ಸ್ಕೌಟ್ ಆಯುಕ್ತರ ಪತ್ನಿಯಾಗಿದ್ದು, ಹಲವು ಸಂಘ–ಸಂಸ್ಥೆಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತಾವು ಸೇವೆಯಲ್ಲಿ ತೊಡಗಿಸಿಕೊಂಡಿದ್ದರು. ಅವರ ಮಾವ ದಿವಂಗತ ಶ್ರೀಯುತ ಟಿ. ವೆಂಕಟಸುಬ್ಬಾ ಶಾಸ್ತ್ರಿಗಳು 1924 ರಿಂದ 1948 ಮತ್ತು ಮೈದುನ ದಿವಂಗತ ಶ್ರೀ ಟಿ.ವಿ. ನಾರಾಯಣ ಶಾಸ್ತ್ರಿಗಳು 1990 ರಿಂದ 2001 ರ ವರೆಗೆ ಜಿಲ್ಲಾ ಆಯುಕ್ತರಾಗಿ ಮತ್ತು ಮುಖ್ಯ ಆಯುಕ್ತರಾಗಿ ಜಿಲ್ಲಾ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿರುತ್ತಾರೆ.

ಇವರು ಉತ್ತಮ ಕ್ಲಾತ್ ಪೇಂಟಿಂಗ್ ಮತ್ತು ಪಾಕಪ್ರವೀಣರು. ಅವರು ಅಪಾರ ಸಂಖ್ಯೆಯ ಬಂಧು–ಬಳಗ ಹಾಗೂ ಮಿತ್ರರನ್ನು ಅಗಲಿದ್ದಾರೆ. ಅವರ ಆತ್ಮಕ್ಕೆ ಶಾಂತಿ ನೀಡಲು ಹಾಗೂ ಅವರ ಕುಟುಂಬದವರಿಗೆ, ಬಂಧು ಮಿತ್ರರಿಗೆ ದುಃಖವನ್ನು ಭರಿಸುವ ಶಕ್ತಿಯನ್ನು ಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ

# ಕಿವಿನೋವು

– ಡಾ. ವಸುಂಧರಾ ಭೂಪತಿ
ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ

ಕಿವಿನೋವು ಅನೇಕ ಕಾರಣಗಳಿಂದ ಉಂಟಾಗುತ್ತದೆ.

* ತಣ್ಣನೆಯ ಗಾಳಿಯಲ್ಲಿ ತಿರುಗಾಡುವುದರಿಂದ
* ಕಿವಿಯ ಮೇಲೆ ಪೆಟ್ಟು ಬೀಳುವುದರಿಂದ
* ಗಂಟಲು ನೋವಿರುವಾಗ
* ಕಿವಿಯಲ್ಲಿ ಕುರ, ಗುಳ್ಳೆಗಳಿದ್ದಲ್ಲಿ
* ಮಳೆಗಾಲ ಹಾಗೂ ಚಳಿಗಾಲಗಳಲ್ಲಿನ ಶೀತದ ವಾತಾವರಣದಿಂದ
* ದೀರ್ಘಕಾಲದಿಂದ ಕಿವಿ ಸ್ವಚ್ಛಗೊಳಿಸಿಕೊಳ್ಳದಿದ್ದಲ್ಲಿ ಗುಗ್ಗೆ ಸಂಗ್ರಹವಾಗುವುದರಿಂದ
* ಸೋಂಕು ಉಂಟಾಗುವುದರಿಂದ
* ಬಾಹ್ಯ ವಸ್ತು ಕಿವಿಯೊಳಗೆ ಸೇರಿಕೊಳ್ಳುವುದರಿಂದ

ಕಿವಿನೋವು ಇರುವಾಗ ಜ್ವರ ಬರುವುದು, ತಲೆಸುತ್ತು, ತಲೆನೋವು ಕಾಣಿಸಿಕೊಳ್ಳಬಹುದು. ಕಿವಿ ಒಳಭಾಗದಲ್ಲಿ ನೋವು, ಕಿವಿಯಲ್ಲಿ ಗುಂಯ್ ಎನ್ನುವ ಶಬ್ದ ಕೇಳಬಹುದು. ಕಿವಿಯ ಒಳಭಾಗದಲ್ಲಿ ಚುಚ್ಚಿದಂತಾಗುವುದು, ಕಿವಿಯ ಭಾಗದಲ್ಲಿ ಊತ ಕಾಣಿಸಿಕೊಳ್ಳುತ್ತದೆ.

ಕಿವಿಗೆ ಯಾವುದೇ ಕಾರಣದಿಂದ ಪೆನ್ನು, ಕಡ್ಡಿ ಮುಂತಾದ ಚೂಪಾದ ಮತ್ತು ಗಟ್ಟಿಯಾದ ವಸ್ತುಗಳಿಂದ ಸ್ವಚ್ಛ ಮಾಡಿಕೊಳ್ಳಬಾರದು. ಇದರಿಂದ ಕಿವಿಗೆ ಹಾನಿಯುಂಟಾಗುವ ಸಾಧ್ಯತೆಯಿರುತ್ತದೆ.

ಕಿವಿಗೆ ಹತ್ತಿ : ಸ್ನಾನ ಮಾಡುವಾಗ ಎರಡೂ ಕಿವಿಗಳಿಗೆ ಹತ್ತಿಯಿರಿಸಿಕೊಂಡು ಸ್ನಾನ ಮಾಡಬೇಕು. ಶೀತದ ವಾತಾವರಣದಲ್ಲಿ ತಿರುಗಾಡುವಾಗ ಹಾಗೂ ವಾಹನಗಳಲ್ಲಿ ಸಂಚರಿಸುವಾಗ ಕಿವಿಗೆ ಹತ್ತಿ ಇರಿಸಿಕೊಳ್ಳಬೇಕು.

ಉಗುಳು ನುಂಗುವುದು : ಕಿವಿ ನೋವಿರುವ ಸಮಯದಲ್ಲಿ ಸುಮ್ಮನೆ ಕುಳಿತುಕೊಂಡು ಉಗುಳು ನುಂಗುವುದರಿಂದ ಸ್ವಲ್ಪ ನೋವು ಕಡಿಮೆಯಾಗುವುದು.

ಆಕಳಿಕೆ : ಆಕಳಿಸುವಾಗ ಮಾಡಿದಂತೆ ಬಾಯಿ ತೆರೆದು 'ಆ' ಎನ್ನುವದೂ ಕೂಡ ನೋವನ್ನು ಕಡಿಮೆ ಮಾಡುತ್ತದೆ.

ಬಿಸಿನೀರು ಕುಡಿಯುವುದು: ಬಿಸಿನೀರನ್ನು ಸ್ವಲ್ಪ ಸ್ವಲ್ಪವೇ ಬಾಯಿಗೆ ಹಾಕಿಕೊಂಡು ಚಪ್ಪರಿಸುತ್ತ ಕುಡಿಯುವುದರಿಂದ ನೋವಿನ ತೀವ್ರತೆ ತಗ್ಗುತ್ತದೆ.

ಧೂಮಪಾನ ತ್ಯಜಿಸಿ : ಧೂಮಪಾನದಿಂದ ನೋವು ಹೆಚ್ಚಾಗುತ್ತಿದ್ದರಿಂದ ಧೂಮಪಾನ ತ್ಯಜಿಸುವುದೊಳ್ಳೆಯದು.

ಕಿವಿಗೆ ಎಣ್ಣೆ ಹಾಕುವುದು : ಯವುದೇ ಎಣ್ಣೆ ಕಿವಿಗೆ ಹಾಕುವುದಾದರೂ ಬಿಸಿ ಮಾಡಿ, ಆರಿಸಿ ಹಾಕಬೇಕು.

**ಮನೆ ಮದ್ದು :**

* ಉತ್ತರಾಣಿ ಕಡ್ಡಿಯನ್ನು ಜಜ್ಜಿ ಎಳ್ಳೆಣ್ಣೆಯಲ್ಲಿ ಹಾಕಿ ಬಿಸಿ ಮಾಡಿ ತಣ್ಣಗಾದ ನಂತರ ಶೋಧಿಸಿ ನಾಲ್ಕರಿಂದ ಆರು ಹನಿ ಕಿವಿಗೆ ಹಾಕಬೇಕು.
* ಮಂಗರವಳ್ಳಿ ಕಾಂಡವನ್ನು ಜಜ್ಜಿ ರಸ ತೆಗೆದು ಶೋಧಿಸಿ ದಿನಕ್ಕೊಂದು ಬಾರಿಯಂತೆ ಎರಡು ಹನಿ ಕಿವಿಗೆ ಹಾಕಬೇಕು.
* ಬೆಳ್ಳುಳ್ಳಿಯನ್ನು ಜಜ್ಜಿ ಎಳ್ಳೆಣ್ಣೆಯಲ್ಲಿ ಹಾಕಿ ಬಿಸಿ ಮಾಡಿ, ತಣ್ಣಗಾದ ನಂತರ ಇಲ್ಲವೇ ಸ್ವಲ್ಪ ಬೆಚ್ಚಗಿರುವಾಗಲೇ ಶೋಧಿಸಿ ಮೂರ್ನಾಲ್ಕು ಹನಿ ಕಿವಿಗೆ ಹಾಕಬೇಕು.
* ಎಳ್ಳೆಣ್ಣೆಯಲ್ಲಿ ಚಿಕ್ಕತುಂಡು ಬಜೆ ಮತ್ತು ಬೆಳ್ಳುಳ್ಳಿಯನ್ನು ಜಜ್ಜಿ ಕಾಯಿಸಿ, ಶೋಧಿಸಿ ಮೂರು ಹನಿ ಕಿವಿಗೆ ಹಾಕಬೇಕು.

**ಕಿವಿ ಸೋರುವುದು :**

* ಎಳ್ಳೆಣ್ಣೆಯಲ್ಲಿ ಮೂರು ಚಿಟಿಕೆ ಹಿಂಗನ್ನು ಸೇರಿಸಿ ಕಾಯಿಸಿ ಕಿವಿಗೆ ಹಾಕಬೇಕು.
* ಜಾಜಿಸೊಪ್ಪಿನ ರಸ, ಹಿಂಗು ಮತ್ತು ಎಳ್ಳೆಣ್ಣೆ ಹಾಕಿ ಕಾಯಿಸಿ, ಆರಿಸಿ, ಶೋಧಿಸಿ ಕಿವಿಗೆ ಮೂರ್ನಾಲ್ಕು ಹನಿ ಹಾಕಬೇಕು.
* ನುಗ್ಗೆರಸ ಮತ್ತು ಎಳ್ಳೆಣ್ಣೆ ಸಮಭಾಗ ಸೇರಿಸಿ ಕಾಯಿಸಿ ತಣ್ಣಗಾದ ಮೇಲೆ ನಾಲ್ಕು ಹನಿ ಹಾಕಬೇಕು.
* ಕಿರುಕಸಾಲೆ ಸೊಪ್ಪಿನ ರಸ ಕೊಬ್ಬರಿ ಎಣ್ಣೆಯಲ್ಲಿ ಕಾಯಿಸಿ, ಆರಿಸಿ, ಶೋಧಿಸಿ 4 ರಿಂದ 5 ಹನಿ ಕಿವಿಗೆ ಹಾಕಬೇಕು.
* ಶ್ರೀಗಂಧದ ತೈಲದ ಎರಡು ಹನಿ ಹಾಕಬೇಕು. ಇದರಿಂದ ಸ್ರಾವದ ಜೊತೆಗೆ ವಾಸನೆಯು ಕಡಿಮೆಯಾಗುತ್ತದೆ.

**ಕಿವಿಯಲ್ಲಿನ ಗುಗ್ಗೆ :**

* ಕಿವಿಯಲ್ಲಿ ಕಪರ್ದಿಕ (ಕವಡೆ) ಭಸ್ಮವನ್ನು ಹಾಕಿ ನಂತರ ಎರಡರಿಂದ ಮೂರು ಹನಿ ನಿಂಬೆರಸ ಹಾಕುವುದರಿಂದ ಗುಗ್ಗೆ ಮೆತ್ತಗಾಗಿ ಹೊರಬರುತ್ತದೆ.
* ಲಕ್ಕಿ (ನಿರ್ಗುಂಡಿ) ಎಲೆಯ ರಸ ಮತ್ತು ಎಳ್ಳೆಣ್ಣೆ ಸೇರಿಸಿ ಕಾಯಿಸಿ ತಯಾರಿಸಿದ ತೈಲವನ್ನು ಎರಡು–ಮೂರು ಹನಿ ದಿನಕ್ಕೊಮ್ಮೆ ಒಂದು ವಾರಕಾಲ ಹಾಕುವುದರಿಂದ ಗುಗ್ಗೆ ಮೆತ್ತಗಾಗುತ್ತದೆ.



## ಅಭಿನಂದನೆಗಳು



**ಶ್ರೀ ನಂಜುಂಡಪ್ಪ.** ಎ.ಎಲ್.ಟಿ(ಸ್ಕೌಟ್ಸ್)
ಜಿಲ್ಲಾ ಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ ವಿಜೇತರು
ಸಹ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಬಲಮಂದೆ
ಬಂಗಾರಪೇಟೆ, ಕೋಲಾರ ಜಿಲ್ಲೆ



**ಶ್ರೀ ಎಮ್. ನಾರಾಯಣಸ್ವಾಮಿ,** ಸ್ಕೌಟ್‌ಮಾಸ್ಟರ್
ಜಿಲ್ಲಾ ಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ ವಿಜೇತರು
ಸಹ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ
ಮತ್ತಿಕುಂಟೆ, ಕೋಲಾರ ಜಿಲ್ಲೆ

ಇವರುಗಳಿಗೆ ಭಾರತ್ ಸ್ಕೌಟ್ಸ್ & ಗೈಡ್ಸ್ ರಾಜ್ಯ ಸಂಸ್ಥೆಯ ಅಭಿನಂದನೆಗಳು

– ರಾಜ್ಯ ಕಾರ್ಯದರ್ಶಿ



# ಆಧುನಿಕ ವಾಹನಗಳು

ಜಿ.ಎನ್. ನರಸಿಂಹಮೂರ್ತಿ
ಕಾರ್ಯದರ್ಶಿ, ಕನ್ನಡ ಗಣಕಪರಿಷತ್




ನಾವೆಲ್ಲ ನೋಡುವ ವಾಹನಗಳನ್ನು ಚಲಿಸಲು ಒಬ್ಬ ಡ್ರೈವರ್ ಬೇಕೇ ಬೇಕಲ್ಲವೆ? ಅದು ಕಾರು, ಬಸ್ಸು, ಲಾರಿ ಮುಂತಾದ ಯವುದೇ ವಾಹನವಿರಬಹುದು. ಡ್ರೈವರ್ ಇಲ್ಲದೆ ಅವು ಮುಂದೆ ಸಾಗುವುದಿಲ್ಲ. ಇವಕ್ಕೆಲ್ಲ ಇಂಧನ ಪೆಟ್ರೋಲು ಅಥವಾ ಡೀಸೆಲ್ ಅಲ್ಲವೆ?

ಇನ್ನು ಮುಂದೆ ತಂತ್ರಜ್ಞಾನ ಇವನ್ನು ಪೂರ್ಣವಾಗಿ ಬದಲಾಯಿಸುವ ಹಂತದಲ್ಲಿದ್ದು ಎಲ್ಲರೂ ಅದರ ಬೆಳವಣಿಗೆಯನ್ನು ಕುತೂಹಲದಿಂದ ನಿರೀಕ್ಷಿಸುವಂತೆ ಮಾಡಿದೆ.

ಮೊದಲನೆಯದು ಇಂಧನ. ಈಗ ಬೇರೆಯದೇ ತರಹದ ಬ್ಯಾಟರಿಗಳು ಬಂದಿವೆ. ಇವು ನೀವು ಮೊಬೈಲ್ ಸಾಧನಗಳಲ್ಲಿ ಕಾಣಬರುವ ಬ್ಯಾಟರಿಗಳ ದಾಯಾದಿಗಳು. ಇವನ್ನು ಲಿಥಿಯಂ ಅಯಾನು ಬ್ಯಾಟರಿ ಎಂದು ಕರೆಯುತ್ತರೆ. ಆದರೆ ಇವು ತಮ್ಮಲ್ಲಿ ಅಗಾಧ ಪ್ರಮಾಣದ ವಿದ್ಯುಚ್ಛಕ್ತಿಯನ್ನು ಸಂಗ್ರಹಿಸಿಟ್ಟುಕೊಂಡು ವಾಹನಗಳಲ್ಲಿ ಎಂಜಿನ್ನು ಇರುವ ಸ್ಥಳದಲ್ಲಿ ಕುಳಿತು ಅವು ನೂರಾರುಗಟ್ಟಲೇ ಕಿಲೋಮೀಟರುಗಳು ಚಲಿಸಬಲ್ಲ ಸಾಮರ್ಥ್ಯವನ್ನು ಒದಗಿಸುತ್ತವೆ. ಈ ಬಗೆಯ ವಾಹನಗಳಿಂದ ಅನೇಕ ಪ್ರಯೋಜನಗಳಿವೆ. ಮೊದಲನೆಯದಾಗಿ ಇಂಧನಗಳ ಕುರಿತಾದದ್ದು. ನಾವು ಬಳಸುವ ಪೆಟ್ರೋಲು ಮತ್ತು ಡೀಸೆಲ್‌ಗಳು ಭೂಮಿಯಿಂದ ದೊರೆಯುತ್ತಿದ್ದು ಅವು ಮುಗಿದು ಹೋಗುವ ದಿನಗಳು ದೂರವಿಲ್ಲ. ಆದುದರಿಂದ ಅವು ಬಳಕೆಗೆ ಸಿಗುವುದು ಕೆಲವು ಕಾಲ ಮಾತ್ರವೇ. ಆ ದೃಷ್ಟಿಯಿಂದ ಹೊಸ ಬ್ಯಾಟರಿಗಳು ಸಾರಿಗೆಗೆ ಹೊಸ ಜೀವವನ್ನಿತ್ತಿವೆ. ಇನ್ನು ಮುಂದೆ ವಿದ್ಯುಚ್ಚಾಲಿತ ವಾಹನಗಳೇ ಎಲ್ಲ ಕಡೆ ಇರುತ್ತವೆ ಎಂದರೆ ಅದೇನೂ ಸುಮ್ಮನೆ ಹೇಳುವ ಮಾತಲ್ಲ. ಈ ವಾಹನಗಳು ಪರಿಸರಕ್ಕೆ ಹಾನಿ ಮಾಡುವ ಹೊಗೆಯುಗುಳುವುದಿಲ್ಲ. ಗಡಚಿಕ್ಕುವ ಶಬ್ದ ಮಾಡುವುದಿಲ್ಲ. ಜೊತೆಗೆ ಇಂಧನದ ಅಗತ್ಯವಿಲ್ಲದಿರುವುದರಿಂದ ಸಾಗಣೆಯ ಖರ್ಚು ವಿಪರೀತ ಕಡಿಮೆ. ಇಂತಹ ವಾಹನಗಳನ್ನು ಯಾರು ತಾನೆ ಸ್ವಾಗತಿಸುವುದಿಲ್ಲ?

ಎಂದೇ ಎಲ್ಲಾ ಕಾರು ಮತ್ತು ಇತರ ವಾಹನಗಳ ತಯಾರಕರು ಈಗಾಗಲೇ ವಿದ್ಯುಚ್ಚಾಲಿತ ವಾಹನಗಳ ತಯಾರಿಕೆಗೆ ಮುಂದಾಗಿದ್ದಾರೆ. ಕೇಂದ್ರ ಸರ್ಕಾರದ ನೀತಿಯೂ ಇದಕ್ಕೆ ಪೂರಕವಾಗಿದೆ. 2030ರ ವೇಳೆಗೆ ಎಲ್ಲಾ ವಾಹನಗಳೂ ವಿದ್ಯುಚ್ಚಾಲಿತವಾಗಿರಬೇಕು ಎಂದು ಕೇಂದ್ರ ಸರ್ಕಾರದ ನೀತಿಯಲ್ಲಿ ಘೋಷಿಸಲಾಗಿದೆ. ಆದರೆ ಈ ಹೊಸ ಬ್ಯಾಟರಿಗಳು ಎಲ್ಲಾ ರೀತಿಯಲ್ಲಿಯೂ ಸಮರ್ಪಕವಾಗಿವೆ ಎಂದೇನೂ ಅಲ್ಲ. ಅವಕ್ಕೂ ಹಲವಾರು ಮಿತಿಗಳಿವೆ. ಆದರೆ ಈ ದಿಕ್ಕಿನಲ್ಲಿ ಸಂಶೋಧನೆಗಳು ನಡೆಯುತ್ತಲೇ ಇವೆ. ಹೊಸ ಸಮರ್ಪಕ ಬ್ಯಟರಿಯ ಅನ್ವೇಷಣೆಯಲ್ಲಿ ಅನೇಕ ವ್ಯಕ್ತಿಗಳು, ಸಂಸ್ಥೆಗಳು ನಿರತವಾಗಿವೆ.

ಇನ್ನು ಈ ವಾಹನಗಳು ಮಾನವ ಡ್ರೈವರುಗಳ ಸಹಾಯವಿಲ್ಲದೇ ತಮ್ಮಷ್ಟಕ್ಕೇ ಚಲಿಸುವ ತಂತ್ರಜ್ಞಾನ ವ್ಯಾಪಕವಾಗಿ ಆವರಿಸಿಕೊಳ್ಳುತ್ತಿದೆ ಮತ್ತು ನಮ್ಮತ್ತ ಅತ್ಯಂತ ವೇಗವಾಗಿ ಧಾವಿಸುತ್ತಿದೆ. ಜನರಲ್ ಮೋಟಾರ್ಸ್, ಫೋರ್ಡ್, ಮರ್ಸಿಡಸ್ ಬೆನ್‌ಜ್, ಆಡಿ, ನಿಸಾನ್, ಟೊಯೋಟಾ, ಬಿ ಎಂ ಡಬ್ಲ್ಯು, ಮತ್ತು ವೋಲ್ವೋನಂತಹ ಅನೇಕ ಕಂಪನಿಗಳು ಈ ದಿಕ್ಕಿನಲ್ಲಿ ಪ್ರಯೋಗಗಳನ್ನು ನಡೆಸಿವೆ. ಇಂತಹ ವಾಹನಗಳ ತಯಾರಿಕೆಯಲ್ಲಿ ತೊಡಗಿವೆ. ಅಮೆರಿಕದಲ್ಲಿ ಇದು ವ್ಯಾಪಕವಾಗಿ ಪರೀಕ್ಷೆಗೀಡಾಗಿದೆ. ಈಗಿರುವ ಅಲ್ಪ ಸ್ವಲ್ಪ ಮಿತಿ. ಕೊರತೆಗಳನ್ನು ತುಂಬಿ ಈ ತಂತ್ರಜ್ಞಾನವನ್ನು ಉಳಿದ ಎಲ್ಲ ತಂತ್ರಜ್ಞಾನಗಳನ್ನು ಮೆಟ್ಟಿ ನಿಲ್ಲುವ ತಂತ್ರಜ್ಞಾನವನ್ನಾಗಿಸಲು ಅನೇಕ ತಂತ್ರಾಂಶ ಕಂಪನಿಗಳು ಶ್ರಮಿಸುತ್ತಿವೆ. ಭಾರತದಲ್ಲಿ ಕೂಡಾ ಕಂಪನಿಗಳು ಇಂತಹ ವಾಹನಗಳ ತಯರಿಕೆಗೆ ತೊಡಗಿಕೊಳ್ಳಲು ಸಿದ್ಧವಾಗುತ್ತಿವೆ.



44ನೇ ಪುಟಕ್ಕೆ ಮುಂದುವರೆಯುತ್ತದೆ

# ಕೆಮ್ಮು ಸೀನು



ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿ

ಕೆಮ್ಮುವುದು, ಸೀನುವುದು ಸಾಮಾನ್ಯವಾಗಿ ಎಲ್ಲರೂ ಒಂದಿಲ್ಲಾ ಒಂದು ಸಲ ಮಾಡಿಯೇ ಮಾಡುತ್ತಾರೆ. ಎಲ್ಲಾ ಕೆಮ್ಮು ಕ್ಷಯರೋಗವಲ್ಲ. ಎಲ್ಲಾ ಸೀನು ನೆಗಡಿಯಲ್ಲ, ಪ್ರತಿಯೊಬ್ಬರೂ ಕೆಮ್ಮು ಸೀನು ವೈಜ್ಞಾನಿಕವಾಗಿ ಯಾಕೆ ಎಂದು ಅರಿಯಲೇ ಬೇಕು. ಒಂಟಿ ಸೀನು ಎರಡು ಸಲ ಸೀನು ಎಂಬ ಮೂಢ ನಂಬಿಕೆ ಬಿಟ್ಟು ಯಾವಾಗ ಯಾಕೆ ಸೀನುತ್ತೇವೆ, ಕೆಮ್ಮುತ್ತೇವೆ ತಿಳಿದುಕೊಳ್ಳುವುದು ಒಳಿತು.

ನಮ್ಮ ಮೂಗಿನ ಒಳಪದರು (mucus membrone) ತುಂಬ ಸೂಕ್ಷ್ಮ. ಅದರಲ್ಲಿರುವ ರೋಮ (ಕೂದಲು) ಬೇಡವಾದ ಕಣಗಳನ್ನು ಸೋಸುವ (Filter) ತರಹ ಕೆಲಸಮಾಡುತ್ತವೆ. ಧೂಳು ಅಥವ ರೋಗಾಣು ಇಲ್ಲವೇ ವೈರಾಣುಗಳು ಉಸಿರಿನಲ್ಲಿ ಒಳಗೆ ಹೋದಾಗ ಮೂಗಿನಲ್ಲಿ ಅದನ್ನು (ಈುಟಣಜಡಿ) ಮಾಡಲಾಗುತ್ತದೆ. ಹೆಚ್ಚಾದಾಗ ಅದನ್ನು ಹೊರಹಾಕಲು ಜೋರಾಗಿ ನೀರು ಬರುತ್ತದೆ. ಆದ್ದರಿಂದ ಸೀನು ನಮ್ಮನ್ನು ರೋಗಾಣುವಿನಿಂದ ಕಾಪಾಡಲು (Protective Mechanism) ಬರುವ ಸ್ವಾಭಾವಿಕ ಕ್ರಮ.

ಇದೇ ರೀತಿ ರೋಗಾಣುಗಳು ಅಥವಾ ವೈರಾಣುಗಳು ಮೂಗು ದಾಟಿ ಗಂಟಲು ಮತ್ತು ಶ್ವಾಸಕೋಶದಲ್ಲಿ ಸೇರಿದಾಗ ಕೆಮ್ಮು ಬರುವುದು. ಇದು ಬೇಡವಾದ ರೋಗಾಣು ಕಫ ಹೊರಹಾಕಲು ದೈವದತ್ತವಾಗಿ ನಮಗೆ ಇರುವ ಒಂದು ಸಾಧನ. ಆದರೆ ದುರಂತವೆಂದರೆ ಸೀನು, ಕೆಮ್ಮು ಒಬ್ಬ ವ್ಯಕ್ತಿಯನ್ನು ಕಾಪಾಡಲು ಬಂದರೆ ಅದನ್ನು ಆ ವ್ಯಕ್ತಿ ಎಲ್ಲಿ ಅಂದರೆ ಅಲ್ಲಿ ಮಾಡಿದಾಗ ಕಾಯಿಲೆ ಇತರರಿಗೆ ಹಬ್ಬುತ್ತದೆ. ನಾವು ಕೆಮ್ಮಿದಾಗ ಸೀನಿದಾಗ 166 ಕಿ.ಮಿ. ವೇಗದಲ್ಲಿ ಕೋಟ್ಯಾಂತರ ರೋಗಾಣುಗಳು ಎದುರಿರುವ ವ್ಯಕ್ತಿ ಮುಖದ ಮೇಲೆ ಅಪ್ಪಳಿಸಿ ಅವರಿಗೆ ಕಾಯಿಲೆ ಬರುತ್ತದೆ. ಇದಕ್ಕೆ (droplet infection) ಅನ್ನುತ್ತೇವೆ. ಜನಸಾಮಾನ್ಯರು ಹವೆಕೆಟ್ಟಿದೆ ಎಂದು ದೂಷಿಸುತ್ತಾರೆ. ಆದರೆ ನಿಜವಾದ ಹವೆಯಲ್ಲಿ ಪ್ರದೂಷಣೆ ತರುವುದು ನಮ್ಮ ಸೀನು ಕೆಮ್ಮು. ಆದ್ದರಿಂದ ಪ್ರತಿಯೊಬ್ಬರೂ ಸೀನುವಾಗ ಕೆಮ್ಮುವಾಗ ಎರಡೂ ಕೈಯಿಂದ ಮೂಗು, ಬಾಯಿ ಮುಚ್ಚಿಕೊಂಡು ಒಂದು ಬದಿಗೆ ತಿರುಗಿಕೊಂಡು ಸೀನಬೇಕು, ಇಲ್ಲ ಕೆಮ್ಮಬೇಕು. ಇಲ್ಲ ಕೈವಸ್ತ್ರ ಹಿಡಿದುಕೊಂಡು ಕೈಯನ್ನು ತೊಳೆದುಕೊಳ್ಳಬೇಕು. ಇಲ್ಲದಿದ್ದರೆ ಅವರಿಗೆ ಇರುವ ಖಿ.ಃ. ನೆಗಡಿ, ಕೆಮ್ಮು ಇತರರಿಗೆ ಹಬ್ಬುತ್ತದೆ.

ಸ್ವಾತಂತ್ರ್ಯಾನಂತರದಲ್ಲಿ ಸ್ಕೌಟ್ ಚಳವಳಿಯು ನಮ್ಮ ದೇಶದಲ್ಲಿ ಜನಾನುರಾಗಿಯಾಗಿ ಬೆಳೆಯುತ್ತಾ ಬಂದಿದೆ. ಬಾಲಕ, ಬಾಲಕಿಯರಿಗೆ ಸಚ್ಚಾರಿತ್ರ್ಯ ನಿರ್ಮಾಣದಲ್ಲಿ ಶಿಕ್ಷಣ ನೀಡುತ್ತದೆ. ಸದೃಢರಾಗಿ, ಶಿಸ್ತುಗಾರರಾಗಿ, ಸಮಾಜೋಪಯೋಗಿ ವ್ಯಕ್ತಿಗಳಾಗಿ ಬಾಳುವಂತೆ ತರಬೇತಿ ನೀಡುವ ಚಳವಳಿಯಾಗಿದೆ. ಸ್ಕೌಟ್ಸ್/ಗೈಡ್ಸ್‌ಗಳು ನಿಯಮವನ್ನು ನೆನಪಿನಲ್ಲಿಟ್ಟುಕೊಂಡು, ತಮ್ಮ ಕರ್ತವ್ಯ ಪಾಲನೆಯಲ್ಲಿ ನಿರತರಾಗಲೆಂದು ಆಶಿಸುತ್ತೇನೆ. ರಾಷ್ಟ್ರದ ಶಾಂತಿದೂತರಾಗಿ ಬಾಳಲೆಂದು ಆಶಿಸುತ್ತೇನೆ.

ಶ್ರೀ ಜಯಚಾಮರಾಜ ಒಡೆಯರ್

# ಸ್ಕೌಟಿಂಗ್ ಕಲ್ಪನೆಗೆ ಸ್ಫೂರ್ತಿಯಾದ ಡ್ಯಾನಿಯಲ್ ಕಾರ್ಟರ್ ಬಿಯರ್ಡ್

ಎಂ ಎನ್ ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

ನ್ಯಾಷನಲ್ ಜಿಯಾಗ್ರಫಿಕ್ ಛಾನಲ್‌ನಲ್ಲಿ ಬಿತ್ತರವಾಗುವ “ಸರ್ವೈವಲ್” ಕಾರ್ಯಕ್ರಮಗಳನ್ನು ನೋಡಿದಾಗ ಅಬ್ಬ, ಇಂತಹ ಹುಚ್ಚರೂ ಇದ್ದಾರೆಯೇ? ಇದು ಸಾಧ್ಯವೇ ಎಂದು ಅಚ್ಚರಿ ಪಡುತ್ತೇವೆ. ಪ್ರಸ್ತುತ ಬೇರ್ ಗ್ರಿಲ್ಸ್‌ರವರ ಸಾಹಸಗಳು ನಮ್ಮನ್ನು ಇದು ಸಾಧ್ಯವೆ ಎಂದು ಬೆರಗುಗೊಳಿಸುತ್ತವೆ. ಆದರೆ ವೈಲ್ಡ್ ವೆಸ್ಟ್ ಸಾಹಸಿಗಳಂತೆ ಇಂಗ್ಲೀಷ್ ಚಿತ್ರಗಳಲ್ಲಿ ತೋರಿಸುವ, ಸುಮಾರು 150 ವರ್ಷಗಳ ಹಿಂದಿನ ಜೀವನವನ್ನೇ, ಒಂದು ಸಾಹಸದಂತೆ ಬದುಕಿದ ನಿಜವಾದ ಪ್ರಥಮ ಸ್ಕೌಟ್ ಎಂದರೆ ಡಿ.ಸಿ ಬಿಯರ್ಡ್ ಎನಿಸುತ್ತದೆ.



ಡ್ಯಾನಿಯಲ್ ಬಿಯರ್ಡ್ ಜೊತೆ ಬೇಡನ್ ಪೊವೆಲ್

## ಪ್ರಥಮ ಮೂಲ ಸ್ಕೌಟ್ :– ಡ್ಯಾನಿಯಲ್ ಕಾರ್ಟರ್ ಬಿಯರ್ಡ್

1850 ರಲ್ಲಿ ಅಮೆರಿಕಾದ ಒಹಾಯೋ ರಾಜ್ಯದ ಸಿನ್‌ಸಿನ್ನಾಟಿಯಲ್ಲಿ ಪ್ರಮುಖ ಕಲಾಕಾರನ ಮಗನಾಗಿ ಜನಿಸಿದ ಡ್ಯಾನಿಯಲ್ ಕಾರ್ಟರ್ ಬಿಯರ್ಡ್ ತನ್ನ ಬಹಳಷ್ಟು ಬಾಲ್ಯದ ದಿನಗಳನ್ನು ಫೇನ್ಸ್‌ವಿಲ್ ಸಮೀಪದ ಗ್ರಾಮೀಣ ಕೃಷಿ ಪ್ರದೇಶದಲ್ಲಿ ಕಳೆದನು. ಈ ದಿನಗಳು ಅವನ ಸಂಪೂರ್ಣ ಭವಿಷ್ಯವನ್ನು ರೂಪಿಸಿದವು. ಒಂದು ಕೊಡಲಿ, ಚಾಕು, ಸ್ವಲ್ಪ ಹಗ್ಗ, ಮೀನು ಹಿಡಿಯುವ ಕೊಕ್ಕೆಗಳು, ಇಡೀ ಬೇಸಿಗೆಯನ್ನು ಕಾಡಿನಲ್ಲಿ ಕಳೆಯಲು ಅವನ ಸಂಗಾತಿಗಳಾಗಿದ್ದವು. ತಾನೇ ದೋಣಿಯನ್ನು ಮಾಡಿಕೊಳ್ಳುತ್ತಿದ್ದ, ಗುಡಿಸಲು ನಿರ್ಮಿಸಿಕೊಳ್ಳುವುದು ಉರುಳು ಹಾಕಿ ಪ್ರಾಣಿಗಳನ್ನು ಹಿಡಿಯುವುದು, ಹೀಗೆ ರಾಬಿನ್ ಸನ್ ಕ್ರೂಸೋ ರೀತಿಯಲ್ಲಿ ಪ್ರಕೃತಿಯ ನಡುವೆ ಬದುಕುವ ಕಲೆಯನ್ನು ಸಂಪೂರ್ಣ ಕರಗತ ಮಾಡಿಕೊಂಡಿದ್ದ.




1882 ನಲ್ಲಿ ಮೊದಲು ಮುದ್ರಣಗೊಂಡ ಕೃತಿಯ ಮುಖ ಪುಟ.

ಮುಂದಿನ ದಿನಗಳಲ್ಲಿ ಮದುವೆಯಾಗಿ ಒಬ್ಬ ಕಲಾಕಾರ ಮತ್ತು ಬರಹಗಾರನಾದರೂ ಕೂಡಾ ಅವನ ಹೃದಯ ಅರಣ್ಯದಲ್ಲಿರುತ್ತಿತ್ತು.

ಅರಣ್ಯದಲ್ಲೇ ಹೆಚ್ಚು ಕಾಲ ಕಳೆಯುತ್ತಿದ್ದ ಬಿಯರ್ಡ್ ಬದಲಾವಣೆಗಾಗಿ ನಗರದಲ್ಲಿ ಬಂದು ಕೆಲಕಾಲ ತಂಗುತ್ತಿದ್ದ!

ಪರಿಸರದ ಮಧ್ಯದಲ್ಲಿ ಬಾಲಕರು ಅಥವಾ ಎಲ್ಲರೂ ಬದುಕುವುದು ಅತ್ಯಂತ ಉತ್ತಮ ಶಿಕ್ಷಣವೆಂದು ಘಾಢವಾಗಿ ನಂಬಿದ್ದವರು ಬಿಯರ್ಡ್. “ಡೇನಿಯಲ್ ಬೂನ್‌ನ ಬಾಲಕರು” ಮತ್ತು “ಬಾಯ್ ಪಯನೀರ್ಸ್” ಎನ್ನುವ ಎರಡು ಸಂಸ್ಥೆಗಳನ್ನು ಹುಟ್ಟು ಹಾಕಿದ್ದ ಡಿ.ಸಿ. ಬಿಯರ್ಡ್, 1910 ರಲ್ಲಿ ಸ್ಕೌಟಿಂಗ್ ಜನಪ್ರಿಯವಾದ ನಂತರ ಈ ಸಂಸ್ಥೆಗಳನ್ನು ಸ್ಕೌಟಿಂಗ್‌ನೊಂದಿಗೆ ವಿಲೀನಗೊಳಿಸಿದರು. ಈ ವಿಲೀನಗೊಂಡ ಸಂಸ್ಥೆಯ ಸಮವಸ್ತ್ರ ವಿನ್ಯಾಸ ಮಾಡಿದ ಹೆಗ್ಗಳಿಕೆ ಈ ದೂರದೃಷ್ಟಿಯ ನಿಜವಾದ ದಾರ್ಶನಿಕ, ರೆಡ್ ಇಂಡಿಯನ್ ಕೌ ಬಾಯ್ ಹಾಗೆ ಬದುಕಿದ ಬಿಯರ್ಡ್‌ಗೆ ಸಲ್ಲುತ್ತದೆ. ಅಮೆರಿಕ ಬಾಯ್ ಸ್ಕೌಟ್ ಸಂಸ್ಥೆಯ ಮೇಲೆ ಇವರ ಪ್ರಭಾವ ಸರಿಸಾಟಿಯಿಲ್ಲದ್ದು. ಆದ್ದರಿಂದ ಬಿಯರ್ಡ್‌ಗೆ ಸ್ಕೌಟಿಂಗ್‌ನ ಅತ್ಯಂತ ಉನ್ನತ ಪುರಸ್ಕಾರವಾದ ಗೋಲ್ಡನ್ ಈಗಲ್ ಬಾಡ್ಜ್ ನೀಡಿ ಗೌರವಿಸಲಾಗಿದೆ.

> ಇಂದಿನ ಜಗತ್ತಿನಾದ್ಯಂತ ಚಾಲ್ತಿಯಲ್ಲಿರುವ ಸ್ಕೌಟ್ ಸಮವಸ್ತ್ರವನ್ನು ವಿನ್ಯಾಸಮಾಡಿದವನು ಡಿ.ಸಿ. ಬಿಯರ್ಡ್

ಪ್ರಕೃತಿಯ ಮಧ್ಯೆ ಬದುಕಿದ ಅನುಭವ ಮತ್ತು ಅದರ ಮಹತ್ವದ ಸಂಪೂರ್ಣ ಅರಿವಿದ್ದುದ್ದರಿಂದ ತನ್ನ ಸಂತೋಷವನ್ನೇ ನಗರವಾಸಿ ಮಕ್ಕಳು ಪಡೆಯಲೆಂಬುವ ಉದ್ದೇಶ್ಯದಿಂದ ಸ್ಥಳೀಯ ಪತ್ರಿಕೆ “ಸೇಯಿಂಟ್ ನಿಕೊಲಾಸ್” ನಿಯತಕಾಲಿಕದಲ್ಲಿ

ಲೇಖನಗಳನ್ನು ಬರೆಯಲು ಪ್ರಾರಂಭಿಸಿದ. ಇದರ ಮುಖ್ಯ ಉದೇಶ "ನಗರ ವಾಸಿಗಳು, ಪ್ರಕೃತಿಯ ವಿಸ್ಮಯಗಳನ್ನು ತಿಳಿದುಕೊಳ್ಳುವುದರ ಮೂಲಕ ತಮ್ಮ ಜೀವನ ಹೆಚ್ಚು ಸಂತೋಷದಾಯಕ ಮಾಡಿಕೊಳ್ಳಲಿ," ಎನ್ನುವುದಾಗಿತ್ತು.



1882ರಲ್ಲಿ ಈ ಲೇಖನಗಳನ್ನೆಲ್ಲಾ ಕ್ರೋಡೀಕರಿಸಿ ಪುಸ್ತಕದ ರೀತಿಯಲ್ಲಿ ಹೊರತರಲಾಯಿತು. ನಂತರದ 50 ವರ್ಷಗಳಲ್ಲಿ ಅಗಣಿತ ಮುದ್ರಣಗಳನ್ನು ಕಂಡ ಈ ಪುಸ್ತಕ ಹಲವಾರು ಪೀಳಿಗೆಗಳನ್ನು ಪ್ರಭಾವಿಸುತ್ತಾ ಬಂದಿದೆ. ಅಮೇರಿಕಾದ ಗ್ರಾಮೀಣರು 100ವರ್ಷಗಳ ಹಿಂದೆ ಬದುಕಿದ ರೀತಿಯನ್ನೆ ಪ್ರತಿಬಿಂಭಿಸುವ ಈ ಪುಸ್ತಕ,

"ದಿ ಅಮೇರಿಕನ್ ಬಾಯ್ಸ್ ಹ್ಯಾಂಡಿ ಬುಕ್"ನಲ್ಲಿ ಬರುವ ಚಟುವಟಿಕೆಗಳು ಎಷ್ಟು ವೈವಿಧ್ಯಮಯವಾಗಿವೆ ಎಂದರೆ ಒಂದು ಬಾರಿ ಇದನ್ನು ತಿರುವಿ ಹಾಕಿದರೆ, ಕೆಲವು ಚಟುವಟಿಕೆಗಳನ್ನಾದರೂ ಮಾಡಿ ನೋಡುವ ಕುತೂಹಲ ಮೂಡುತ್ತದೆ.

ಒಬ್ಬ ಉತ್ತಮ ಚಿತ್ರಕಾರ ಮತ್ತು ಲೇಖಕನಾದ ಬಿಯರ್ಡ್ ಮಕ್ಕಳು ಕಾಡು–ಮೇಡು ತಿರುಗಿ ಪ್ರಕೃತಿಯಿಂದ ಕಲಿಯಬಹುದಾದ ಬದುಕುವ ಕಲೆಯನ್ನು ಅತ್ಯಂತ ಆಕರ್ಷಕವಾಗಿ ಚಿತ್ರಿಸುತ್ತಾನೆ. ವಿವಿಧ ರೀತಿಯ ಗಾಳಿಪಟ ಮಾಡಿ ಹಾರಿಸುವ ವಿಧಾನ, ಕಾಡಿನಲ್ಲಿ ಗುಡಿಸಲು ಕಟ್ಟಿಕೊಳ್ಳುವುದು, ದೋಣಿ ತಯಾರಿಸುವುದು, ವಿವಿಧ ಗಂಟುಗಳು ಮತ್ತು ಅವುಗಳ ಉಪಯೋಗಗಳು, ಮೀನು ಹಿಡಿಯುವ ರೀತಿ, ಕವಣೆ ಅಥವಾ ಬುಮರ‍್ಯಾಂಗ್ ತಯಾರಿಸಿ ಪ್ರಯೋಗಿಸುವುದು, ಬೆಂಕಿಯ ಬಗ್ಗೆ ಜಾಗರೂಕತೆ ಮತ್ತು ತುರ್ತು ಪರಿಸ್ಥಿತಿಯಲ್ಲಿ ಅದರಿಂದ ರಕ್ಷಿಸಿಕೊಳ್ಳುವ ಬಗೆ, ಪಕ್ಷಿ, ಪ್ರಾಣಿಗಳನ್ನು ಸ್ಟಫ್ ಮಾಡುವ ರೀತಿ, ಬಿಲ್ಲು ಮಾಡುವುದು ಹಾಗೂ ಅದನ್ನು ಉಪಯೋಗಿಸುವ ವಿಧಾನ, ಹೀಗೆ ಕಾಡಿನಲ್ಲಿ ಬದುಕಬಲ್ಲ ಕಲೆಯ ಹತ್ತು ಹಲವು ಉತ್ತಮ ಸಲಹೆಗಳು ಈ ಪುಸ್ತಕದಲ್ಲಿ ಲಭ್ಯ.




"ಭಾರ ಹೊರುವ ವಿಧಾನ "ಈ ರೀತಿಯ ಚಿತ್ರಗಳು ಕಲೆಯಲ್ಲಿ ಅವರ ಪರಿಣತಿಗೆ ಸಾಕ್ಷಿ"

"ಸ್ಕೌಟಿಂಗ್ ಫಾರ್ ಬಾಯ್ಸ್" ನೋಡಿದರೆ ಬಿಪಿಯವರು ಖಂಡಿತಾ ಡ್ಯಾನಿಯಲ್ ಕಾರ್ಟರ್ ಬಿಯರ್ಡ್‌ರವರ, "ದಿ ಅಮೇರಿಕನ್ ಬಾಯ್ಸ್ ಹ್ಯಾಂಡಿ ಬುಕ್," ನಿಂದ ಪ್ರಭಾವಿತರಾಗಿರುವುದು ಕಂಡುಬರುತ್ತದೆ.

❐❐

42ನೇ ಪುಟದಿಂದ

ಇಂತಹವು ಬಂದಲ್ಲಿ ಸಾಂಪ್ರದಾಯಿಕ ವಾಹನಗಳನ್ನು ತಯಾರಿಸುವ ಕಂಪನಿಗಳು ಅತಿ ಶೀಘ್ರವಾಗಿ ತಮ್ಮ ಚಟುವಟಿಕೆಯನ್ನು ಬದಲಿಸಿಕೊಳ್ಳಬೇಕಾದ ಅನಿವಾರ್ಯತೆ ಮೂಡಿಬರುತ್ತದೆ. ಈಗ ಕೆಲಸ ಮಾಡುತ್ತಿರುವ ಲಕ್ಷಾಂತರ ಡ್ರೈವರುಗಳಿಗೆ ಬದಲಿ ಉದ್ಯೋಗ ಹೊಂದಿಸುವ ಅದಕ್ಕೆ ಬೇಕಾದ ಕೌಶಲವನ್ನು ಒದಗಿಸುವ ಅಗಾಧ ಹೊಣೆ ಸರ್ಕಾರದ ಮೇಲೆ ಸಮಾಜದ ಮೇಲೆ ಬೀಳುತ್ತದೆ.

ಇದರಿಂದ ಅನುಕೂಲಗಳಿಲ್ಲದಿಲ್ಲ. ಇದರಿಂದ ಸಾಗಾಟ ವೆಚ್ಚ ಬಹಳ ಕಡಿಮೆಯಾಗುತ್ತದೆ. ವ್ಯಕ್ತಿಗತವಗಿ ಕಾರುಗಳನ್ನು ಇರಿಸಿಕೊಳ್ಳುವ ಅಗತ್ಯವೇ ಬರುವುದಿಲ್ಲ. ಓಲಾ ಮತ್ತು ಊಬರ್‌ನಂತಹ ಕಂಪನಿಗಳು ಮಾತ್ರವೇ ಕಾರುಗಳನ್ನು ಖರೀದಿಸಿ ಜನರ ಓಡಾಟದ ಅಗತ್ಯಗಳನ್ನು ಅತಿ ಅಗ್ಗದ ದರಗಳಲ್ಲಿ ಪೂರೈಸುತ್ತವೆ. ಇದೇ ರೀತಿ ಲಾರಿ ಮತ್ತು ಇತರ ಭಾರೀ ವಾಹನಗಳ ಕುರಿತೂ ಬದಲಾವಣೆ ಆಗುತ್ತದೆ. ಸಾರಿಗೆಯ ವೆಚ್ಚ ಮತ್ತು ಅದಕ್ಕೆ ತಗಲುವ ಕಾಲಗಳು ಗಣನೀಯವಾಗಿ ಕಡಿಮೆಯಾಗುತ್ತವೆ. ರಸ್ತೆಗಳಲ್ಲಿ ಆಗುವ ಅಪಘಾತಗಳ ಪ್ರಮಾಣ ಕಡಿಮೆಯಾಗುತ್ತದೆ. ಹೀಗೆ ಅನೇಕ ಪ್ರಯೋಜನಗಳ ಪಟ್ಟಿಯನ್ನೇ ಆ ಉದ್ಯಮ ನೀಡುತ್ತಿದೆ. ಏನಾಗುವುದೋ ಕಾದುನೋಡಬೇಕಷ್ಟೆ.

❐❐

# ಸ್ಕೌಟ್ ಮಾಸ್ಟರುಗಳ ಪಾತ್ರ

## ಲಾರ್ಡ್ ಬೇಡನ್ ಪೋವೆಲ್ ರವರ ಪುಸ್ತಕದಿಂದ ಉದ್ಧೃತ

ರಾ. ಚಂದ್ರಶೇಖರನ್
ಲೀಡರ್ ಟ್ರೈನರ್

ಸ್ಕೌಟಿಂಗ್ ತತ್ವಗಳೆಲ್ಲವೂ ನೇರ ದಿಕ್ಕಿನಲ್ಲಿ ಸಾಗುತ್ತವೆ. ಅವುಗಳನ್ನು ಕಾರ್ಯಗತ ಮಾಡುವ ಜವಾಬ್ದಾರಿ ಸ್ಕೌಟ್ ಮಾಸ್ಟರ್ ಕೈನಲ್ಲಿದೆ. ಅವರು ಈ ತತ್ವಗಳನ್ನು ಹೇಗೆ ಅನ್ವಯಿಸಿ, ಅನುಷ್ಠಾನಕ್ಕೆ ತರುತ್ತಾರೆಯೋ ಅದಕ್ಕೆ ತಕ್ಕಂತೆ ಗೆಲುವು ಸಾಧನೆ ಇರುತ್ತದೆ. ನನ್ನ ಪ್ರಸ್ತುತ ಉದ್ದೇಶವಾದರೂ ಈ ಅನ್ವಯಗೊಳಿಸುವ ಕಾರ್ಯದಲ್ಲಿ ಸ್ಕೌಟ್ ಮಾಸ್ಟರಿಗೆ ನೆರವಾಗುವುದು.

1. ಸ್ಕೌಟ್ ಶಿಕ್ಷಣದ ಉದ್ದೇಶವನ್ನು ತಿಳಿಸುವುದು

2. ಅವುಗಳ ಸಾಧನೆಗೆ ಸಲಹಾತ್ಮಕ ವಿಧಾನಗಳನ್ನು ತಿಳಿಸುವುದು.

ಎಲ್ಲಾ ವಿಷಯಗಳನ್ನೂ ವಿವರಗಳನ್ನೂ ತಿಳಿಸಬೇಕೆಂದು, ಅನೇಕ ಸ್ಕೌಟ್ ಮಾಸ್ಟರುಗಳು, ಬಯಸುತ್ತಾರೆಂದು, ಅಂದುಕೊಳ್ಳುತ್ತೇನೆ ಆದರದು ಅಸಾಧ್ಯ ಸಂಗತಿ. ಕಾಲ, ದೇಶ, ಪರಿಸ್ಥಿತಿಗಳಿಗನುಗುಣವಾಗಿ ಸಮಸ್ಯೆಗಳೂ, ಪರಿಹಾರಗಳೂ ವೈವಿಧ್ಯಮಯ. ಒಂದೇ ಸ್ಥಳದ, ಸ್ವಲ್ಪ ಅಂತರದಲ್ಲಿರುವ ದಳಗಳಲ್ಲಿ, ಬಾಲರಲ್ಲಿ ಅಲ್ಲಿನ ಪರಿಸ್ಥಿತಿಗಳಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಇನ್ನು ವಿಶ್ವವ್ಯಾಪಿ ಸ್ಕೌಟಿಂಗ್‌ನ ಲಕ್ಷಾಂತರ ಬಾಲಕರು, ದಳಗಳು, ಪರಿಸ್ಥಿತಿಗಳನ್ನು ಊಹಿಸಿಕೊಳ್ಳಿ. ಆದರೂ ಹಲವಾರು ಸಾಮಾನ್ಯ ಸಲಹೆಗಳನ್ನು ನೀಡಬಹುದು, ಏನು ಮಾಡಿದರೆ ಉತ್ತಮ ರೀತಿಯಲ್ಲಿ ಗೆಲುವು ಸಾಧಿಸಬಹುದು. ವಿವೇಚಿಸಿ ತಮ್ಮ ದಳಗಳಲ್ಲಿ ಕಾರ್ಯಗತ ಮಾಡಬೇಕು.

ವಿವರಗಳಿಗೆ ಹೋಗುವ ಮುನ್ನ ಒಂದು ಮಾತು. ಏನೇನೋ ಊಹಿಸಿಕೊಂಡು, ಅಗಾಧವಾಗಿದೆ. ಅಸಾಧ್ಯ ಎಂದು ಧೃತಿಗೆಡಬೇಡಿ, ಗುರಿಯನ್ನು ಮುಂದೆ ಇಟ್ಟುಕೊಂಡು ಪ್ರಯತ್ನಿಸುತ್ತಾ ಹೋದರೆ, ಅಗಾಧತೆಯು ತಾನಾಗಿ ಕರಗುತ್ತಾ ಹೋಗುತ್ತದೆ. ಗುರಿಯನ್ನು ಮುಂದಿಟ್ಟುಕೊಂಡು, ವಿಧಿವಿಧಾನಗಳನ್ನು ಅನುಸರಿಸುತ್ತಾ, ಪರಿಸ್ಥಿತಿಗೆ ತಕ್ಕಂತೆ ಮಾರ್ಪಡಿಸಿಕೊಳ್ಳುತ್ತಾ ಮುಂದುವರೆದರೆ ಗೆಲುವು ಸಾಧಿಸುತ್ತೀರಿ.

ಗಿರಿಶಿಖರವೇರುವಾಗಿನ ಕಂಟಕಗಳಂತೆ, ಅಡ್ಡಬಂದ ಕಂಟಕಗಳನ್ನು ನಿವಾರಿಸಿಕೊಳ್ಳುತ್ತಾ ಒಂದೊಂದೇ ಹೆಜ್ಜೆ ಮೇಲೇರುತ್ತಾ ಹೋಗಬೇಕು. ಕೆಳಗೆನಿಂತು ಶಿಖರವನ್ನು ನೋಡಿ, ಅಧೈರ್ಯಪಟ್ಟರಾದೀತೆ? ಮೇಲೆ ನಿಂತು ಕೆಳಗೆ ನೋಡಿ ಹೆದರಿದರಾದೀತೆ?

ಉನ್ನತಾದರ್ಶಗಳನ್ನು ಸಾಧಿಸಿಯೇ ತೀರಬೇಕೆಂದಿಲ್ಲ. ಆದರ್ಶಗಳು ಹಾಗಿರಲಿ, ಅವು ಉನ್ನತವಾದುವು. ಆದರೆ ನಮ್ಮ ಪ್ರಯತ್ನ ಪ್ರಾಮಾಣಿಕವಾಗಿರಬೇಕು ಸತತವಾಗಿರಬೇಕು.

ಖಿನ್ನತೆ ಆವರಿಸಿ, ಒಮ್ಮೊಮ್ಮೆ ಗೆಲುವು ಸಾಧ್ಯವೇ ಇಲ್ಲವೆಂಬಂತೆ ಭಾಸವಾಗುತ್ತದೆ. ಕಷ್ಟಗಳು ಸಮಸ್ಯೆಗಳು ಮೇಲಿಂದ ಮೇಲೆ ಬಂದು ಕಾಡುತ್ತವೆ. ಆದರೆ ಹತ್ತಿರದಿಂದ ಪರಿಹರಿಸಲು ಪ್ರಯತ್ನಿಸಿದಂತೆ, ಅವು ದೂರದಿಂದ, ಊಹಿಸಿಕೊಂಡಷ್ಟು ಅಗಾಧವಲ್ಲವೆಂದು ಕಂಡುಬರುತ್ತದೆ, ಮನಸ್ಸಿಗೆ ನೆಮ್ಮದಿ ಸಿಗುತ್ತದೆ. "ಧೈರ್ಯಂ ಸರ್ವತ್ರ ಸಾಧನಂ" ಎಂಬ ಸಂಸ್ಕೃತ ಸೂಕ್ತಿಯುಂಟು ನೆನಪಿರಲಿ.

☐☐

# ಬದುಕುವ ಕಲೆಯನ್ನು ಕಲಿಸುವ ಸ್ಕೌಟ್-ಗೈಡ್ ತರಬೇತಿ ಶಿಬಿರ

**ಲಕ್ಷ್ಮೀಶ ಭಟ್.** (ಆರ್.ಎಸ್.ಎಲ್.)
ಎಸ್.ಡಿ.ಎಂ. ಪ.ಪೂ. ಕಾಲೇಜು, ಉಜಿರೆ ದ.ಕ.

ಜೂನ್ 25 ರಿಂದ ಜುಲೈ 1 ರ ವರೆಗೆ ಬೆಂಗಳೂರಿನ ಡಾ. ಆನಿಬೆಸೆಂಟ್ ರಾಜ್ಯ ತರಬೇತಿ ಶಿಬಿರದಲ್ಲಿ ರೋವರ್ ಸ್ಕೌಟ್ ಲೀಡರ್ ತರಬೇತಿ ಶಿಬಿರ ಪಡೆದು ಬಂದ ನನ್ನ ಅನುಭವದ ಕೆಲವನ್ನು ಹಂಚಿಕೊಳ್ಳುತ್ತಿದ್ದೇನೆ. ಸ್ಕೌಟ್-ಗೈಡ್ ಬಗ್ಗೆ ಅಷ್ಟೇನೂ ಗೊತ್ತಿರದ ನಂಗೆ ಸ್ಕೌಟ್-ಗೈಡ್ ಬಗ್ಗೆ ಅಭಿಮಾನ ಉಕ್ಕುವಂತೆ ಮಾಡಿದ ಶಿಬಿರ ಎಂಬುವುದರಲ್ಲಿ ಮತ್ತೆರಡು ಮಾತಿಲ್ಲ. ಶಿಬಿರದ ದಿನಚರಿಯೇ ನಮ್ಮನ್ನು ಆಲಸ್ಯ ರಹಿತ ವ್ಯಕ್ತಿಯನ್ನಾಗಿ ಮಾರ್ಪಡಿಸುತ್ತದೆ. ಬೆಳಿಗ್ಗೆ 5.30 ರಿಂದ ಆರಂಭವಾಗುವ ತರಬೇತಿ ರಾತ್ರಿ ಶಿಬಿರಾಗ್ನಿ ಮುಗಿದು ಮರುದಿನದ ತಯಾರಿ ಮುಗಿಸಿ ಮಲಗುವವರೆಗೆ 11–12 ಕಳೆಯುತ್ತಿತ್ತು ಅಷ್ಟೇ. ಶಿಬಿರದ ಸ್ಥಾನ ತಲುಪುವವರೆಗೂ ವಸತಿಯ ಬಗ್ಗೆ ಅಷ್ಟೇನೂ ತಲೆಕೆಡಿಸಿಕೊಂಡಿರಲಿಲ್ಲ. ಆದರೆ ಯಾವಾಗ ಸ್ಥಳ ತಲುಪಿದೇನೋ ಪಕ್ಕಾ ಟೆಂಟ್ ವಾಸ ಎಂಬುದು ಖಾತ್ರಿಯಾಗಿ ಸುಮ್ಮನೆ ವಾಪಸ್ ತಿರುಗಿ ಹೋಗಿಬಿಡೋಣ ಎನಿಸಿತ್ತು. ಅಷ್ಟರಲ್ಲೇ ಅಲ್ಲಿದ್ದ ಸಹ ಶಿಬಿರಾರ್ಥಿಗಳ ಅಭಿಪ್ರಾಯ ಬಹುತೇಕ ಒಂದೇ ಆಗಿತ್ತು. ಯಾಕೆಂದರೆ ನಾವೆಲ್ಲ ಮೊದಲ ಸಲ ಸ್ಕೌಟ್ ತರಬೇತಿಗೆ ಬಂದಿದ್ದವು ಹಾಗಾಗಿ ಸ್ಕೌಟ್ ತರಬೇತಿ, ಅದರ ·ರೂಪ, ವಿಸ್ತಾರ ಯಾವುದೊ ಸಹ ಗೊತ್ತಿರಲಿಲ್ಲ. ಅಂತೂ ಮದ್ಯಾಹ್ನದ ಹೊತ್ತಿಗೆ ನೋಂದಣಿ ಮುಗಿಸಿ ಊಟ ಮಾಡಿ ಶಿಬಿರಕ್ಕೆ ವಿದ್ಯುಕ್ತ ಚಾಲನೆ ಸ್ಕೌಟ್‌ನ ಪ್ರಾರ್ಥನೆ ಗೀತೆ ಮೂಲಕ ದೊರೆಯಿತು. ಎಲ್ಲೂ ಕೇಳಿರದ ಗೀತೆ ಎಂಬಂತೆ ನನ್ನಂತ ಹೊಸಬರಿಗೆ ಅನುಭವವಾಗಿ ಸುಮ್ಮನೆ ಬಾಯಿ ಅಲ್ಲಾಡಿಸಿದೆವು. ನಂತರ ರೋವರ್ಸ್ ಲೀಡರ್ಸ್ ಶಿಬಿರಾಳುಗಳು ಸ್ವ ಪರಿಚಯವನ್ನು ನಮ್ಮ ತರಬೇತುದಾರರಿಗೂ ಹಾಗೂ ತರಬೇತುದಾರರ ಪರಿಚಯವನ್ನು ನಾವು ಮಾಡಿಕೊಂಡೆವು. ಅಲ್ಲಿ ಶಿಬಿರದ ನೀತಿ–ನಿಯಮಗಳನ್ನು ನಾವು ಇರಬೇಕಾದ ರೀತಿಯನ್ನು ವಿವರಿಸಿದಾಗ ಒಮ್ಮೆ ನಗು ಬಂತು ಏಕೆಂದರೆ ದಿನಾಲು ನಾವೇ ವಿದ್ಯಾರ್ಥಿಗಳಿಗೆ ಇಂತಹ ಹತ್ತಾರು ನಿಯಮಗಳನ್ನು ಹೇಳತ್ತಿದ್ದೇವೆ. ಇವತ್ತು ನಾವು ಹೇಳಿಸಿಕೊಳ್ಳಬೇಕಾ ಎಂಬ ಒಂದು ಚಿಕ್ಕ ಅಹಂ ಇದ್ದದ್ದರಿಂದ. ರಾತ್ರಿ ಆಗುತ್ತಿದ್ದಂತೆ ಸ್ವಲ್ಪ ಭಯ, ಬೇಸರ ಎರಡೂ ಆರಂಭ. ಏಕೆಂದರೆ ಟೆಂಟ್ ವಸತಿ ಯಾರು ಎಷ್ಟೇ ಹೇಳಿದರೂ ನನ್ನ ಮನಸ್ಸಿನಲ್ಲಿ ಒಂದು ಚಿಕ್ಕ ಆಸೆಯಿತ್ತು ಬಹುಷಃ ಮಲಗುವ ಹೊತ್ತಿಗೆ ರೂಮ್ ಕೊಡಹುದೆಂದು. ಆದ್ರೆ ಅದು ಮರೀಚಿಕೆ ಎಂಬುದು ನಿಧಾನವಾಗಿ ಗೊತ್ತಾಗಲು ತೊಡಗಿದಾಗ ಯಾಕಾದ್ರೂ ಬಂದೇನಪ್ಪಾ ಇಲ್ಲಿಗೆ ಎಂದು ಮತ್ತೊಮ್ಮೆ ಅನ್ನಿಸಿತ್ತು. ಅಂತೂ ಆ ಚಿಕ್ಕ ಟೆಂಟಿನಲ್ಲಿ 8 ಸಹ ಶಿಬಿರಾರ್ಥಿಗಳೊಂದಿಗೆ ಮೊದಲ ರಾತ್ರಿಯನ್ನು ಕಳೆದೆ. ಬೆಳಿಗ್ಗೆ ಬೇಗ ಏಳಬೇಕೆನ್ನುವ ನಮ್ಮ ತರಬೇತುದಾರ ಸೂಚನೆಯನ್ನೇ ತಲೆಯಲ್ಲಿಟ್ಟು ಮಲಗಿದ್ದರಿಂದ ಬೇಗನೆ ಎದ್ದು ತಣ್ಣೀರ ಸ್ನಾನ ಮುಗಿಸಿ ಶಿಬಿರದ ಮೊದಲ ಪೂರ್ಣ ದಿನಕ್ಕೆ ಅಣಿಯಾದೆವು. ಟೆಂಟ್ ಹೇಗೆ ಮಡಚಬೇಕು, ಸುತ್ತಲೂ ಹೇಗೆ ಚೊಕ್ಕಟವಾಗಿರಬೇಕು, ಟೆಂಟ್ ಹೊರಗಡೆ ಬಿಸಿಲಿಗೆ ಹೇಗೆ ಮತ್ತು ಏಕೆ ಬಟ್ಟೆಗಳನ್ನು ಜೋಡಿಸಬೇಕು ಎಂದು ತರಬೇತುದಾರರು ವಿವರಿಸಿದಾಗ ಟೆಂಟ್ ವಾಸದ ಉದ್ದೇಶ ಸ್ಪಷ್ಟವಾಗಿ ಗೋಚರಿಸಿತ್ತು. ಶಿಬಿರದ ಒಂದೊಂದೇ ಕಾರ್ಯ ಚಟುವಟಿಕೆಗಳು ನಮಗೆ ಹೊಸದಾದ ಜ್ಞಾನವನ್ನು, ಅನುಭವವನ್ನು ನೀಡುತ್ತಿತ್ತು. ಮುಂಜಾನೆ ಹೇಳಿಕೊಟ್ಟ ಬಿಪಿ ಸಿಕ್ಸ್ ವ್ಯಾಯಾಮ, ಧ್ವಜ ಕಟ್ಟುವಿಕೆ, ನಮ್ಮ–ನಮ್ಮ ಸರಂಜಾಮುಗಳನ್ನು ಇಟ್ಟುಕೊಳ್ಳಲು ಹೇಳಿಕೊಟ್ಟ ಸರಳ ಗ್ಯಾಡ್ಜೆಟ್ಸ್, ಜೀವನಕ್ಕೆ ಅತ್ಯವಶ್ಯಕವಾದ ವಿವಿಧ ಬಗೆಯ ಕಟ್ಟುಗಳು ಮತ್ತು ಗಂಟುಗಳು ಹಾಗೂ ಪ್ರಥಮ ಚಿಕಿತ್ಸೆ ಇತ್ಯಾದಿ ದಿನೋಪಯೋಗಿ ಜ್ಞಾನ ನಮ್ಮ ಮನಸ್ಸಿಗೆ ಬಹಳ ಹತ್ತಿರವಾದವು. ಎಲ್ಲರೂ ಕುಳಿತು ಮರದಡಿ ಯಲ್ಲಿ ನೃತ್ಯ–ಗಾಯನದೊಂದಿಗೆ ಕಲಿತ ಸೈದ್ಧಾಂತಿಕ ಶಿಕ್ಷಣ ಮತ್ತು ಪ್ರಾಯೋಗಿಕ ಅನುಭವ ನಮ್ಮನ್ನು ಬಹುಮಟ್ಟಿಗೆ ಸ್ಕೌಟ್ ಕಡೆಗೆ ಸೆಳೆದವು. ಯಾವುದೇ ಅತ್ಯಾಧುನಿಕ ಸಾಧನಗಳಿಲ್ಲದೆ ಕೇವಲ ಒಂದು ಚಿಕ್ಕ ದಂಡ ಹಾಗೂ ನಮ್ಮ ಕಾಲಳತೆಯಲ್ಲೇ ನದಿಯ ಅಂಗಲ, ಮರದ ಎತ್ತರ ಮುಂತಾದ ಅಳತೆಗಳು ಬಹು ನಿಖರವಾಗಿದ್ದು ಅಧುನಿಕ ಯಂತ್ರಗಳ ನಿಖರತೆಯನ್ನು ಮಿರಿಸಿದಂತೆ ತೋರಿಸಿತು. ಅತ್ಯಂತ ಸರಳವಾಗಿ ನಮ್ಮ ಜೊತೆಗೆ ಇರುವ ವಸ್ತುಗಳನ್ನು ಉಪಯೋಗಿಸಿಕೊಂಡು ಹೇಗೆ ಎಲ್ಲಿ ಬೇಕಾದರೂ ಜೀವಿಸಬಹುದೆಂದು ನಮ್ಮ ಎಲ್ಲ 8 ತರಬೇತುದಾರರು ನಮ್ಮ ಮನಸ್ಸಿಗೆ ನಾಟುವಂತೆ ವಿವರಿಸಿದರು. ಭಾರತ್ ಸ್ಕೌಟ್ಸ್–ಗೈಡ್ಸ್‌ನ ಪ್ರಾರ್ಥನಾ ಗೀತೆಯ ಆಶಯದಂತೆ ನಮ್ಮ ಕರ್ಮ ಮತ್ತು ಧರ್ಮ ಸೇವೆ ಎಂಬ ಮಾತು ಸದಾ ನಮ್ಮಲ್ಲಿ ಹಸಿರಾಗಿರುವಂತೆ ಪ್ರೇರೇಪಿಸಿದೆ. ವಿವಿಧ ಕುರುಹುಗಳನ್ನು ಹುಡುಕಿಕೊಂಡು ಗುರಿ ತಲುಪುವಿಕೆ, ನಾವೇ ಸ್ವತಃ ಅಡುಗೆ ಮಾಡಿ ಕಷ್ಟಪಟ್ಟು ಊಟ ಮಾಡಿದ ಹೊರ ಸಂಚಾರದ ಅನುಭವ ಯಾವತ್ತೂ ನಮ್ಮನ್ನು ಎಲ್ಲಿಬೇಕಾದ್ರು ಪರಿಸ್ಥಿತಿ ಹೇಗೆ ಇದ್ರೂ ಜೀವಸಬಹುದೆಂಬ ಭರವಸೆಯನ್ನು ಇಮ್ಮಡಿ ಗೊಳಿಸಿತು. ಶಿಬಿರದಲ್ಲಿ ರಾತ್ರೆ ನಡೆಯುವ ಶಿಬಿರಾಗ್ನಿ ಕಾರ್ಯಕ್ರಮ ಸಹ ಒಂದು ಅಭೂತಪೂರ್ವ ಅನುಭವ. ಕೇವಲ ಅರ್ಧ ಗಂಟೆಯ ಬಿಡುವಿನ ಅವಧಿಯಲ್ಲಿ ಯಾವುದಾದ್ರು ಮನೋರಂಜನಾ ಕಾರ್ಯಕ್ರಮಕ್ಕೆ ತಯಾರಾಗಬೇಕಿತ್ತು. ಇದು ಸಹ ಒತ್ತಡದ ಸನ್ನಿವೇಶವನ್ನು ನಿಭಾಯಿಸುವ ಕಲೆಯ ಜೊತೆಗೆ ನಮ್ಮಲ್ಲಿರುವ ಪ್ರತಿಭೆಗೂ ಸಾಣೆ ಹಿಡಿದಂತೆ ಆಗುವ ಅನುಭವ. ಶಿಬಿರದಲ್ಲಿ ಪ್ರತಿದಿನ ನಾವು ಹಿಂದಿನ ದಿನ ಕಲಿತ ಪಾಠಗಳನ್ನು ಒಪ್ಪಿಸುವ ಎಸ್.ಟಿ.ಎ. ನಮಗೆ ಒಂಥರಾ ಸೆಮ್ ಎಕ್ಸಾಮ್ ಥರ ಅನಿಸುತ್ತಿತ್ತು. ಕಲಿಕೆಯಲ್ಲಿ ಯಾವುದೇ ರಿಯಾತಿ ನೀಡದೆ ನಮ್ಮ ತರಬೇತುದಾರರು ನಮ್ಮನ್ನು ಪಳಗಿಸುವಲ್ಲಿ ವಿಶೇಷ ಆಸಕ್ತಿ

ವಹಿಸಿದ್ದು ತುಂಬಾ ಸಂತಸವೆನಿಸಿತು. ಕೊನೆಯ ದಿನ ದೀಕ್ಷಾ ಕಾರ್ಯಕ್ರಮ ಅಂದರೆ 7 ದಿವಸಗಳ ಅವಧಿಯಲ್ಲಿ ತರಬೇತಿ ಪೂರೈಸಿ ಅಧಿಕೃತವಾಗಿ ವಿಶ್ವಸ್ಕೌಟ್-ಗೈಡ್ ಎಂಬ ಮಹಾ ಸಂಸ್ಥೆಯ ಸದಸ್ಯರಾಗಿ ಸ್ಕೌಟ್ಸ್-ಗೈಡ್ಸ್ ನಿಯಮಗಳನ್ನು ಜೀವನ ಪೂರ್ತಿ ಪಾಲಿಸುತ್ತೇನೆ ಎಂದು ದೀಕ್ಷೆ ತೆಗೆದುಕೊಳ್ಳುವುದು. ಇದಕ್ಕಿಂತಲೂ ಮೊದಲು ಸರ್ವಧರ್ಮ ಪ್ರಾರ್ಥನೆ ನಡೆಯುತ್ತದೆ, ಇದಂತೂ ನಾವೆಲ್ಲ ಒಂದೇ ಎಂಬ ಜಾಗ್ರತ ಭಾವನೆಯನ್ನು ಸ್ಫುರಿಸುತ್ತದೆ. ಕೊನೆಯಲ್ಲಿ ನಮ್ಮ ಶಿಬಿರದ ಮುಖ್ಯ ನೇತಾರರು ಎಲ್ಲರಿಗೂ ಸ್ಕೌಟ್‌ನ ಪ್ರವೇಶ ಬ್ಯಾಡ್ಜ್ ನೀಡಿ ಕಿವಿಯಲ್ಲಿ ಒಂದು ಚಿಕ್ಕ ಉಪದೇಶ ನೀಡಿ ಅಧಿಕೃತವಾಗಿ ನಮ್ಮನ್ನು ವಿಶ್ವ ಸ್ಕೌಟ್ ಸಂಸ್ಥೆಯ ಸದಸ್ಯರನ್ನಾಗಿ ಮಾಡುತ್ತಾರೆ. ಎಲ್ಲ ಮುಗಿದ ಮೇಲೆ ನಾವೆಲ್ಲ ಶಿಬಿರಾರ್ಥಿಗಳು ಹಾಗೂ ತರಬೇತುದಾರರು ವೃತ್ತಾಕಾರದಲ್ಲಿ ಒಬ್ಬರ ಕೈ ಒಬ್ಬರು ಹಿಡಿದು ಒಂದೇ ತಾಯಿಯ ಮಕ್ಕಳು ನಾವೆಲ್ಲ ಎಂಬ ಸುಂದರ ಪದ್ಯವನ್ನು ಹೇಳುತ್ತಾ ವಿಶ್ವ ಭ್ರಾತೃತ್ವವನ್ನು ಸಾರುತ್ತ ಪ್ರತಿಯೊಬ್ಬರಿಗೂ ಸ್ಕೌಟ್ ನಿಯಮದಂತೆ ಲೆಫ್ಟ್ ಹ್ಯಾಂಡ್ ಶೇಕ್ ಮಾಡುತ್ತ ಪರಸ್ಪರ ಬೀಳ್ಕೊಟ್ಟೆವು.

ಕೇವಲ 7 ದಿನದ ಅವಧಿಯಾದರೂ ಈ ಶಿಬಿರದ ಶಿಸ್ತು, ನೀತಿ, ನಿಯಮ, ಸಹಬಾಳ್ವೇ, ಪರೋಪಕಾರ, ಸಮಾಜಸೇವೆ ಹಾಗೂ ಸ್ವರಕ್ಷಣೆ ಇಂತಹ ಪ್ರಮುಖ ವಿಚಾರಗಳು ನಮ್ಮ ಜೀವನ ಶೈಲಿಯನ್ನು ಬದಲಿಸಿಕೊಳ್ಳಲು ಅನುವು ಮಾಡಿಕೊಟ್ಟ ಶಿಬಿರವನ್ನು ಸಂಯೋಜಿಸಿದ ರಾಜ್ಯ ಸಂಸ್ಥೆಗೂ ಹಾಗೂ ಅತ್ಯಂತ ಅಚ್ಚುಕಟ್ಟಾಗಿ ನಮ್ಮನ್ನು ತರಬೇತು ಗೊಳಿಸಿದ ಎಲ್ಲ ತರಬೇತುದಾರರಿಗೂ ತುಂಬು ಹೃದಯದ ಕೃತಜ್ಞತೆಗಳು.

❑❑

## ಸ್ಕೌಟ್ಸ್ ಮತ್ತು ಗೈಡ್ಸ್

# ರಸಪ್ರಶ್ನೆ - 08

– ಎಂ.ಎನ್ ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

01. ಬಿ.ಪಿ. ಯವರ ಪ್ರಕಾರ ಉತ್ತಮ ಆರೋಗ್ಯ ಕಾಪಾಡಿಕೊಳ್ಳಲು ಬೇಕಾದ ಆರು ಮುಖ್ಯ ಅಂಶಗಳು ಯಾವುವು?
02. ಒಂದು ಗಂಟಿನ ಎರಡು ಮುಖ್ಯ ಗುಣಗಳೇನಿರಬೇಕು?
03. JOTA ವಿಸ್ತರಿಸಿ
04. ಶಿಬಿರದಲ್ಲಿ ಬೆಂಕಿಯು ಇಡೀ ರಾತ್ರಿ ನಂದದರಿಲು ಏನು ಮಾಡಬೇಕು
05. ವಿಶ್ವ ಗೈಡ್ಸ್ ಧ್ವಜವನ್ನು ವಿನ್ಯಾಸ ಮಾಡಿದವರು ಯಾರು?
06. ಅಕಸ್ಮಾತ್ ಆಗಿ ತನ್ನದೇ ಪಿಸ್ತೂಲಿನಿಂದ ಗುಂಡು ಹಾರಿ ಬಿ.ಪಿ.ಯವರು ಗಾಯಗೊಂಡಿದ್ದು ಯಾವ ವರ್ಷ?
07. "ಮೆನ್ಸ್ ಸಾನ ಇನ್ ಕಾರ್ಪೊರೆ ನಾನೊ" ಅಂದರೆ "ಆರೋಗ್ಯಕರ ದೇಹದಲ್ಲಿ ಸದೃಡ ಮೆದುಳಿರುತ್ತದೆ." ಇದು ಯಾವ ಭಾಷೆಯ ನಾಣ್ನುಡಿ?
08. ಪರಿಸರ ಸಂರಕ್ಷಣೆಯಲ್ಲಿ 3 ಖ ಗಳು ಎಂದರೆ ಅರ್ಥವೇನು?
09. ರಸ್ತೆಯುದ್ದಕ್ಕೂ ಮಧ್ಯದಲ್ಲಿ ಹಳದಿ ಪಟ್ಟಿ ಹಾಕಿದ್ದರೆ ಅದರ ಅರ್ಥವೇನು?
10. ಯಾವ ಪ್ರಾವೀಣ್ಯತಾ ಪದಕದಲ್ಲಿ ಕುದುರೆ ಲಾಳದ ಗುರುತಿರುತ್ತದೆ?

### ಸ್ಕೌಟ್ ಮತ್ತು ಗೈಡ್ಸ್ ರಸಪ್ರಶ್ನೆ - 07 ಉತ್ತರಗಳು

1. ಒಂದು ದಪ್ಪನೆಯ ಕಂಬಳಿ ಅಥವಾ ಗೋಣಿಚೀಲದಲ್ಲಿ ಸುತ್ತಿ ನೆಲದ ಮೇಲೆ ಉರುಳಾಡಿಸುವುದು–
2. ಅವನೊಬ್ಬ ಸಿಂಹ
3. ನಾಗರ (ಸರ್ಪ), ಕಟ್ಟು ಹಾವು, ಮಂಡಲದ ಹಾವು
4. ಟೆಂಟ್ ಹಾಕುವುದು, ಒಂದು ತಿನಿಸು ತಯಾರಿಸುವುದು, ಬೆಂಕಿ ಮಾಡುವುದು, ಸೇತುವೆ ನಿರ್ಮಿಸುವುದು
5. ಕಿಂಬಲ್ ಒ ಹಾರ
6. ಸೇಯಿಂಟ್ ಪ್ರಾನ್ಸಿಸ್ ಆಫ್ ಅಸ್ಸೆಸ್ಸಿ
7. 7 ನವೆಂಬರ್ 1950
8. Unlock a new world
9. 1:50,000
10. 1901

# 'ಬರ್ನೌಲಿ' ಸೃಷ್ಟಿಸಿದ ಲೋಹದ ಹಕ್ಕಿ

– ಚಳ್ಳಕೆರೆ ಯರ್‍ರಿಸ್ವಾಮಿ

ಬೃಹತ್ ಗಾತ್ರದ ಲೋಹದ ಹಕ್ಕಿ 'ವಿಮಾನ' ಆಗಸದಲ್ಲಿ ಹಾರುತ್ತಾ ಸಾಗುವುದನ್ನು ಚಿಕ್ಕವರಿದ್ದಾಗ ತಲೆಎತ್ತಿ ನೋಡಿ ವಿಸ್ಮಯಗೊಂಡವರೇ ನಾವು ನೀವೆಲ್ಲರೂ. ಇಂದಿಗೂ, ವಿಮಾನ ಪ್ರಯಾಣವೆಂದರೆ ಕಿರಿಯರಿಂದ ಹಿರಿಯರಾದಿ ಯಾಗಿ ಎಲ್ಲರೂ ಮೈಮನವೆಲ್ಲ ಪುಳಕಗೊಳ್ಳುವುದು ಸಾಮಾನ್ಯ. ಮನುಷ್ಯನ ಜ್ಞಾನ ವಿಕಸಿಸಿದಂತೆ ಪ್ರಕೃತಿಯ ನಿಗೂಢಗಳನ್ನೆಲ್ಲಾ ಅರಿಯುತ್ತಾ ಸಾಗಿದ ಫಲವೇ, ಈ ಲೋಹದ ಹಕ್ಕಿಗಳ ಆನ್ವೇಷಣೆ. ವಿಮಾನವನ್ನು ವಿಮಾನ ನಿಲ್ದಾಣದಲ್ಲಿ ಹತ್ತಿರಕ್ಕೆ ಹೋಗಿ ನೋಡಿದಾಗ ಖಂಡಿತಾ ಗಾಬರಿಯಾಗದೇ ಇರದು. ಅಷ್ಟು ದೊಡ್ಡ ಗಾತ್ರ, ತೂಕದ ಆ ವಾಹನ, ಹಲವು ನೂರು ಜನರನ್ನು ಹೊತ್ತು ಗಾಳಿಯಲ್ಲಿ ತೇಲುತ್ತ ಸಾಗುವುದು ವಿಸ್ಮಯ ಹುಟ್ಟಿಸದೇ ಇರದು. ಇದೆಲ್ಲಾ ಸಾಧ್ಯವಾದದ್ದು, ನಮ್ಮ ಸುತ್ತಲಿನ ಪೃಕೃತಿಯ ಸಣ್ಣ ಸಣ್ಣ ಮಾಹಿತಿಗಳ ಅರಿವಿನಿಂದ ಎಂದರೆ ನಿಮಗೆ ಅಚ್ಚರಿಯಾಗಬಹುದು. ಮನುಷ್ಯ ಪಕ್ಷಿಯಂತೆ ಹಾರುವ ಕನಸುಕಂಡದ್ದು ಸಾವಿರಾರು ವರ್ಷಗಳಿಂದಾದರೂ, ಅದು ನನಸಾಗುವ ಆಸೆ ಚಿಗುರಿದ್ದು ಮಾತ್ರ 17ನೇ ಶತಮಾನದಲ್ಲಿ. ಅಲ್ಲಿಂದ ಆದದ್ದೆಲ್ಲಾ ಕನಸಿನಂತೆ ಘಟಿಸಿಹೋಗಿದೆ. 'ವಾಯುಬಲವಿಜ್ಞಾನ' ಎಂಬ ವಿಜ್ಞಾನ ವಿಭಾಗವೇ ನಿರ್ಮಾಣಗೊಂಡಿದೆ. ಹಲವಾರು ವಿಜ್ಞಾನಿಗಳು ಈ ಆನ್ವೇಷಣೆಗಳಿಗೆ ದುಡಿದಿದ್ದಾರೆ. ಮನುಷ್ಯ ಪಕ್ಷಿಯಂತೆ ಹಾರುವ ಈ ರಮ್ಯತೆಯನ್ನು ಸಾಧಿಸಿದ ವಿಮಾನದ ಹಾರಾಟಕ್ಕೆ ಆಧಾರ ತತ್ವಗಳೇನು? ಕೊಡುಗೆ ನೀಡಿದ ಮಹನೀಯನಾರು? ಈ ಪ್ರಶ್ನೆ ನಿಮ್ಮನ್ನೂ ಕಾಡುತ್ತಿರಬಹುದಲ್ಲವೆ.



ಜೋರಾಗಿ ಗಾಳಿಬೀಸುವ ಎತ್ತರದ ಪ್ರದೇಶದಲ್ಲಿ ನೀವು ನಿಂತಾಗ, ಗಾಳಿ ನಿಮ್ಮನ್ನು ತಳ್ಳಿದ ಅನುಭವವಾಗಿರುತ್ತದಲ್ಲವೇ. ಅಂದರೆ, ಗಾಳಿಗೆ ನಿಮ್ಮನ್ನು ನೂಕುವ ಶಕ್ತಿ ಇದೆ ! ಎಂದರ್ಥವಾಗುತ್ತದಲ್ಲವೆ. ಗಾಳಿ ಅಥವ ವಾಯುವಿಗೆ ಇರುವ ಇಂಥಾ ಬಲದಶಕ್ತಿ, ಮತ್ತದು ತನ್ನ ಹಾದಿಯಲ್ಲಿ ಬರುವ ವಸ್ತುವಿನೊಂದಿಗೆ ವರ್ತಿಸುವ ಬಗ್ಗೆ ಅಧ್ಯಯನ ನಡೆಸಿದ ಫಲವೇ 'ವಿಮಾನ' ದ ನಿರ್ಮಾಣವನ್ನು ಸಾಧ್ಯಗೊಳಿಸಿತು !

ಗಾಳಿಯ ಚಲನೆಯಲ್ಲಿನ ಇಂಥಾ ವಿಶಿಷ್ಟ ಗುಣವನ್ನು ಗುರುತಿಸಿದ ವಿಜ್ಞಾನಿ 'ಡೇನಿಯಲ್ ಬರ್ನೌಲಿ'. ಗಾಳಿಯಲ್ಲಿ ತೇಲುವ ಯಂತ್ರದ ಕೌತುಕ ಮೂಡಿಸಿಕೊಂಡು ಆನ್ವೇಷಣೆಯಲ್ಲಿ ತೊಡಗಿಕೊಂಡ ಬರ್ನೌಲಿ ನೆದರ್‌ಲ್ಯಾಂಡ್‌ನ ಗ್ರೊನಿಂಗೆನ್‌ನಲ್ಲಿ, ಜನವರಿ 29, 1700 ರಲ್ಲಿ ಜನಿಸಿದರು. ತಂದೆಯ ಆಸೆಯಂತೆ ವ್ಯವಹಾರ, ಔಷಧ ವಿಜ್ಞಾನ ಓದಲು ಸೇರಿಕೊಂಡರು. ಅದರಲ್ಲಿ ಅವರಿಗೆ ಆಸಕ್ತಿ ಇರಲಿಲ್ಲ. ಆ ಸಮಯದಲ್ಲಿಯೇ ಅವರು ವಿಮಾನ ಹಾರಾಟಕ್ಕೆ ಬೇಕಾದ 'ಬರ್ನೌಲಿತತ್ವ'ವನ್ನು ಆನ್ವೇಷಿಸಿ ವಿವರಿಸಿದರು. ತಮ್ಮ ಕ್ರಾಂತಿಕಾರಿ ತತ್ವವನ್ನು ವಿವರಿಸಲು ಬರ್ನೌಲಿ ಬಳಸಿಕೊಂಡದ್ದು ತಮ್ಮ ಇಷ್ಟದ ಗಣಿತವನ್ನೇ !

ಮೊದಲು ದ್ರವ ವಸ್ತುವು ಚಲಿಸುವಾಗಿನ ಒತ್ತಡ ಬದಲಾವಣೆ ಕಂಡು ಅಚ್ಚರಿಗೊಂಡ ಬರ್ನೌಲಿ, ನಂತರ ಗಾಳಿಯು ವಸ್ತುಗಳನ್ನು ಹಾದು ಹೋಗುವಾಗ ಹೇಗೆ ವರ್ತಿಸುತ್ತದೆ ಎಂಬುದನ್ನು ಅಧ್ಯಯನ ಮಾಡಿದರು. ಆಗಲೇ ಅವರಿಗೆ ತಿಳಿದ ಒಂದು ಸರಳ ಸತ್ಯ : ಮೇಲೆ ಉಬ್ಬಿದ, ಕೆಳಗೆ ಚಪ್ಪಟೆಯಾಗಿರುವ ಆಕಾರದ ರೆಕ್ಕೆಗಳನ್ನು ಹಾದುಹೋಗುವ ಗಾಳಿಯು ರೆಕ್ಕೆಯನ್ನು ಸುಲಭವಾಗಿ ಮೇಲೆತ್ತುತ್ತದೆ ! ಎಂಬುದು. ಇದಕ್ಕೆ ಕಾರಣ, ಮೇಲೆ ಕೆಳಗೆ ಮೂಡುವ ಒತ್ತಡ ವ್ಯತ್ಯಾಸ. ವಿಮಾನದ ಎಡ ಬಲಕ್ಕೆ ಚಾಚಿರುವ ಎರಡು ರೆಕ್ಕೆಗಳು ತಮ್ಮ ಆಕಾರದಿಂದಾಗಿಯೇ ವಿಮಾನವನ್ನು ಆಕಾಶದತ್ತ ಕೊಂಡೊಯುತ್ತವೆ ! ಇದನ್ನು ವಿವರಿಸಿದ್ದು ವಿಜ್ಞಾನಿ ಬರ್ನೌಲಿ. ಅದಕ್ಕಾಗಿಯೇ ಈ ತತ್ವಕ್ಕೆ 'ಬರ್ನೌಲಿ ತತ್ವ' ಎಂದೇ ಹೆಸರಿಡಲಾಯಿತು. ಇದೇ ತತ್ವದ ಆಧಾರದಲ್ಲಿ ನಂತರ ಪ್ರಯೋಗ ನಡೆಸಿದ ರೈಟ್ ಸಹೋದರರು 'ವಿಮಾನ'ವನ್ನು ಯಶಸ್ವಿಯಾಗಿ ಹಾರಿಸಿದರು! ಅದು ಆಗ ಹಾರಿದ್ದು ಸ್ವಲ್ಪವೇ ದೂರ. ಅದೇ ಮನುಕುಲಕ್ಕೆ ಸ್ಫೂರ್ತಿಯಾಯಿತು. ಇಂದು ಶಬ್ದದ ವೇಗಕ್ಕಿಂತಾ ಹಲವು ಪಟ್ಟು ವೇಗವಾಗಿ ಚಲಿಸಬಲ್ಲ ವಿಮಾನಗಳಿವೆ. ಬರ್ನೌಲಿ ಹಚ್ಚಿದ ಸಣ್ಣ ಕಿಡಿಯಿಂದ ಬೆಳಕು ಕಂಡ ಹಲವಾರು ವಿಜ್ಞಾನಿಗಳು, ವಿಮಾನ ವಿಜ್ಞಾನದ ಜ್ಞಾನ ಸಾಗರಕ್ಕೆ ನದಿಗಳಾಗಿ ಹರಿದಿದ್ದಾರೆ. ತಮ್ಮದೇ ದಾಖಲಾರ್ಹ ಕೊಡುಗೆ ನೀಡಿದ್ದಾರೆ. ಬರ್ನೌಲಿ ಕೊಡುಗೆಯನ್ನು ಜಗತ್ತು ಎಂದಿಗೂ ಮರೆಯಲಾರದು.





ಅರಣ್ಯ, ಜೀವಿಪರಿಸ್ಥಿತಿ
ಮತ್ತು ಪರಿಸರ ಇಲಾಖೆ

# ಸಾಕು ಸಾಕು ಪಟಾಕಿಯ ಸಹವಾಸ
# ಈ ದೀಪಾವಳಿಯಂದು ಹಚ್ಚೋಣ ದೀಪ



**ಶ್ರೀ ಬಿ.ಎಸ್. ಯಡಿಯೂರಪ್ಪ**
ಸನ್ಮಾನ್ಯ ಮುಖ್ಯಮಂತ್ರಿಗಳು

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಆಗ್ಮೆಂಟೆಡ್ ರಿಯಾಲಿಟಿ (AR)
ಮುಖಾಂತರ ನಾಗರಿಕರನ್ನು ತಲುಪುತ್ತಿದೆ.




ಆ್ಯಪ್ ಸ್ಟೋರ್ / ಪ್ಲೇ ಸ್ಟೋರ್‌ನಿಂದ
"ನಮ್ಮ ಪರಿಸರ" ಆ್ಯಪ್ ಡೌನ್‌ಲೋಡ್ ಮಾಡಿಕೊಂಡು
ಸನ್ಮಾನ್ಯ ಮುಖ್ಯಮಂತ್ರಿಗಳಾದ **ಶ್ರೀ ಬಿ.ಎಸ್. ಯಡಿಯೂರಪ್ಪ**ರವರ
ದೀಪಾವಳಿ ಹಬ್ಬದ ಸಂದೇಶವನ್ನು ವೀಕ್ಷಿಸಲು ಆ್ಯಪ್ ಮೂಲಕ
ಕ್ಯಾಮೆರಾ ತೆರೆದು ಭಾವಚಿತ್ರ ನೋಡಿ.




- ದೀಪಾವಳಿ ಹಬ್ಬ ಅಥವಾ ಇನ್ನಿತರೆ ಹಬ್ಬಗಳಂದು ಪಟಾಕಿಗಳನ್ನು ರಾತ್ರಿ 8 ಗಂಟೆಯಿಂದ 10 ಗಂಟೆವರೆಗೆ ಹಚ್ಚಲು ಅವಕಾಶ ಇರುತ್ತದೆ.
- ಮಕ್ಕಳು ಪಟಾಕಿ ಸಿಡಿಸುವಾಗ ಸುರಕ್ಷತೆ ಬಗ್ಗೆ ಪೋಷಕರು ವಿಶೇಷ ಕಾಳಜಿ ವಹಿಸುವುದು.
- ಅತಿಹೆಚ್ಚು ಶಬ್ಧ ಉಂಟಾಗುವ ಸರಣಿ ಪಟಾಕಿಗಳಿಂದ **(Joined firecrackers)** ವಾಯು/ಶಬ್ಧ ಮಾಲಿನ್ಯ ಹಾಗೂ ಪಟಾಕಿ ಸಿಡಿಸಿದ ನಂತರದ ಘನತ್ಯಾಜ್ಯ ವಸ್ತುಗಳಿಂದ ಮಾಲಿನ್ಯ ಉಂಟಾಗುವುದರಿಂದ ಅವುಗಳನ್ನು ನಿಷೇಧಿಸಲಾಗಿದೆ.

ಪರಿಸರ ಸ್ನೇಹಿ
ದೀಪಾವಳಿ ಆಚರಿಸಿ





ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಹಾಗೂ
ಗಣಿ ಮತ್ತು ಭೂ ವಿಜ್ಞಾನ ಸಚಿವರಾದ **ಶ್ರೀ ಸಿ.ಸಿ. ಪಾಟೀಲ್**
ಅವರು ಸಮಾರಂಭದಲ್ಲಿ ಭಾಗವಹಿಸಿರುವುದು

ಗಾಳಿಗೆ ವಿಷ ದೇಹಕ್ಕೆ ಅಪಾಯ ಜೀವ ಸಂಕುಲಕ್ಕೆ ಆಘಾತ ತಪ್ಪಿಸಿ !





**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ**
ಇಮೇಲ್ : ho@kspcb.gov.in ವೆಬ್‌ಸೈಟ್ : www.kspcb.gov.in

ಅಧ್ಯಕ್ಷರು
ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ
ಸದಸ್ಯ ಕಾರ್ಯದರ್ಶಿ
ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ

“ಮಹಾತ್ಮ ಗಾಂಧಿ 150ನೇ ಜನ್ಮ ದಿನಾಚರಣೆ”ಯ ಪ್ರಯುಕ್ತ ವಿವಿಧ ಜಿಲ್ಲಾ ಸಂಸ್ಥೆಗಳು ಏರ್ಪಡಿಸಿದ ‘ಸ್ವಚ್ಛತಾ ಕಾರ್ಯಕ್ರಮ’ದಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿರುವುದು.


ಬಳ್ಳಾರಿ


ಬೆಂಗಳೂರು ಗ್ರಾಮಾಂತರ


ಬೆಂಗಳೂರು ದಕ್ಷಿಣ


ಚಿಕ್ಕಮಗಳೂರು


ಧಾರವಾಡ


ಹಾಸನ


ರಾಮನಗರ


ಉಡುಪಿ

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Pages: 52)

## ವಿವಿಧ ಜಿಲ್ಲೆಗಳಲ್ಲಿ ನಡೆದ "ಸ್ಕೌಟ್ಸ್-ಗೈಡ್ಸ್‌ಗಳ ನಡಿಗೆ ಕೃಷಿಯ ಕಡೆಗೆ" ಕಾರ್ಯಕ್ರಮದ ವಿಹಂಗಮ ನೋಟ


ದಾವಣಗೆರೆ


ಕೊಡಗು


ಮಂಡ್ಯ


ಮೈಸೂರು


ಶಿವಮೊಗ್ಗ


ಶಿರಸಿ



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

Published by : The Bharat Scouts & Guides, Karnataka, State Headquarters
Shanthi Gruha #39, Palace Road, Bengaluru - 560 001. Publisher & Editor : K. Gangappa Gowda, Printed by : L. Lingappa
M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bengaluru 26